೫. ಮಾತಾಮಹೀ ಮಾತುಃ ಪಿತಾಮಹೀ ಮಾತುಃ ಪ್ರಪಿತಾಮಹೀಭ್ಯಃ ದಾಭ್ಯಃ ಗೋತ್ರಾಭ್ಯಃ ವಸು.. ....ವಾಸುದೇವೇಭ್ಯಃ

೬. ಪತ್ನ್ಯೈ ಶ್ರೀ ದಾಯೈ ಗೋತ್ರಾಯೈ ವಸ್ತ್ವಂತರ್ಗತ ... ಶ್ರೀ ಪ್ರದ್ಯುಮ್ನಾಯ

೭. ಸುತಾಯ ಶರ್ಮಣೇ ಗೋತ್ರಾಯ ವಸ್ತ್ವಂತರ್ಗತ .... ಶ್ರೀ ಪ್ರದ್ಯುಮ್ನಾಯ

೮. ದುಹಿತ್ರೇ ದಾಯೈ ಗೋತ್ರಾಯೈ ವಸ್ತ್ವಂತರ್ಗತ .. .... .. ಶ್ರೀ ಪ್ರದ್ಯುಮ್ನಾಯ

೯. ಪಿತೃವ್ಯಾಯ ಶರ್ಮಣೇ ಗೋತ್ರಾಯ ಸಪತ್ನೀಕಾಯ ವಸ್ತ್ವಂ ....... ಶ್ರೀಪ್ರದ್ಯುಮ್ನಾಯ

೧೦ ಮಾತುಲಾಯ ಶರ್ಮಣೇ ಗೋತ್ರಾಯ ಸಪತ್ನೀಕಾಯ ಸಸುತಾಯ ವಸ್ತ್ವಂ.. ....ಪ್ರದ್ಯುಮ್ನಾಯ

೧೧. ಭ್ರಾತ್ರೇ ಶರ್ಮಣೇ ಗೋತ್ರಾಯ ಸಪತ್ನಿಕಾಯ ವಸ್ತ್ವಂ. . ಪ್ರದ್ಯುಮ್ನಾಯ

೧೨ ಪಿತೃಭಗಿನ್ಯೈದಾಯೈ ಗೋತ್ರಾಯೈ ಸಭರ್ತೃಕಾಯೈ ಸಸುತಾಯೈ ವಸ್ತ್ವಂ .. ಶ್ರೀ ಪ್ರದ್ಯುಮ್ನಾಯ

೧೩. ಮಾತೃಭಗಿನ್ಯೈದಾಯೈ ಗೋತ್ರಾಯೈ ಸಭರ್ತೃಕಾಯೈ ಸಸುತಾಯೈ ವಸ್ತ್ವಂ .. ಶ್ರೀ ಪ್ರದ್ಯುಮ್ನಾಯ

೧೪. ಆತ್ಮಭಗಿನ್ಯೈದಾಯೈ ಗೋತ್ರಾಯೈ ಸಭರ್ತೃಕಾಯೈ ಸಸುತಾಯೈ ವಸ್ತ್ವಂ ....ಶ್ರೀ ಪ್ರದ್ಯುಮ್ನಾಯ

೧೫. ಶ್ವಶುರಾಯ ಶರ್ಮಣೇ ಗೋತ್ರಾಯ ಸಪತ್ನಿಕಾಯ ಸಸುತಾಯ ವಸ್ತ್ವಂ .. . ಶ್ರೀ ಪ್ರದ್ಯುಮ್ನಾಯ

೧೬. ಗುರುವೇ ಶರ್ಮಣೇ ಗೋತ್ರಾಯ ಸಪತ್ನೀಕಾಯ ಸಸುತಾಯ ವಸ್ತ್ವಂತ.. ..... ಶ್ರೀ ಪದ್ಯುಮ್ನಾಯ

೧೭. ಶಿಷ್ಯಾಯ ಶರ್ಮಣೇ ಗೋತ್ರಾಯ ಸಪತ್ನೀಕಾಯ ಸಸುತಾಯ ವಸ್ತ್ವಂ. ......ಶ್ರೀ ಪ್ರದ್ಯುಮ್ನಾಯ

೧೮ ಆಪ್ತಾಯ ಶರ್ಮಣೇ ಗೋತ್ರಾಯ ಸಪತ್ನೀಕಾಯ ಸಸು ತಾಯ ವಸ್ವ......... ಶ್ರೀ ಪ್ರದ್ಯುಮ್ನಾಯ

## ಶೇಷಾಃ ಸಂಬುದ್ಧಯಃ ಸ್ಮೃತಾಃ ।

೧. ಪಿತೃಪಿತಾಮಹ ಪ್ರಪಿತಾಮಹಾಃ ಶರ್ಮಣಃ ಗೋತ್ರಾಃ ವಸು ರುದ್ರಾದಿತ್ಯಾಂತರ್ಗತ . ವಾಸುದೇವಾಃ

೨. ಮಾತೃಪಿತಾಮಹಿ ಪ್ರಪಿತಾಮಹ್ಯಃ ದಾಃ ಗೋತ್ರಾಃ ವಸು . ವಾಸುದೇವಾಃ

೩. ಸಪತ್ನಜನನೀ ದೇ ಗೋತ್ರೇ ವಸ್ವಂತರ್ಗತ ಶ್ರೀಪ್ರದ್ಯುಮ್ನ

೪. ಮಾತಾಮಹ ಮಾತುಃ ಪಿತಾಮಹ ಮಾತುಃ ಪ್ರಪಿತಾಮಹಾಃ ಶರ್ಮಣಃ ಗೋತ್ರಾಃ ವಸು .. ವಾಸುದೇವಾಃ

೫ ಮಾತಾಮಹೀ ಮಾತುಃ ಪಿತಾಮಹೀ ಮಾತುಃಪ್ರಪಿತಾಮಹೀಃ ದಾಃ ಗೋತ್ರಾಃ ವಸು . ವಾಸುದೇವಾಃ

೬. ಪತ್ನಿ ದೆ ಗೋತ್ರೆ ವಸ್ವಂತರ್ಗತ . ಶ್ರೀಪ್ರದ್ಯುಮ್ನ

೭ ಸುತ ಶರ್ಮನ್ ಗೋತ್ರ ವಸ್ವಂತರ್ಗತ . ಶ್ರೀಪ್ರದ್ಯುಮ್ನ

೮. ಸುತೆ ದೆ ಗೋತ್ರೆ ವಸ್ವಂತರ್ಗತ ಶ್ರೀಪ್ರದ್ಯುಮ್ನ

೯. ಪಿತೃವ್ಯ ಶರ್ಮನ್ ಗೋತ್ರ ಸಪತ್ನೀಕ ಸಸುತ ವಸ್ವಂತ ಶ್ರೀಪ್ರದ್ಯುಮ್ನ

೧೦ ಮಾತುಲ ಶರ್ಮನ್ ಗೋತ್ರ ಸಪತ್ನೀಕ ಸಸುತ ವಸ್ವಂತ ಶ್ರೀ ಪ್ರದ್ಯುಮ್ನ

೧೧. ಭ್ರಾತಃ ಶರ್ಮನ್ ಗೋತ್ರ ಸಪತ್ನೀಕ ಸಸುತ ವಸ್ವಂತ .. ಶ್ರೀ ಪ್ರದ್ಯುಮ್ನ

೧೨. ಪಿತೃಭಗನೀ ದೇ ಗೋತ್ರೇ ಸಭರ್ತೃಕೇ ಸಸುತೇ ವಸ್ವಂತ ಶ್ರೀ ಪ್ರದ್ಯುಮ್ನ

೧೩. ಮಾತೃಭಗಿನೀ ದೇ ಗೋತ್ರೀ ಸಭರ್ತೃಕೇ ಸಸುತೇ ವಸ್ವಂತ ......ಶ್ರೀ ಪ್ರದ್ಯುಮ್ನ

೧೪ ಆತ್ಮಭಗಿನೀ ದೇ ಗೋತ್ರೀ ಸಭರ್ತೃಕೇ ಸಸುತೇ ವಸ್ವಂತ. .. ಶ್ರೀ ಪ್ರದ್ಯುಮ್ನ

೧೫ ಶ್ವಶುರ ಶರ್ಮನ್ ಗೋತ್ರ ಸಪತ್ನೀಕ ಸಸುತ ವಸ್ವಂತ..... ಶ್ರೀ ಪ್ರದ್ಯುಮ್ನ

೧೬. ಗುರೋ ಶರ್ಮನ್ ಗೋತ್ರ ಸಪತ್ನೀಕ ಸಸುತ ವಸ್ವಂತ ಶ್ರೀ ಪ್ರದ್ಯುಮ್ನ

೧೭ ಶಿಷ್ಯ ಶರ್ಮನ್ ಗೋತ್ರ ಸಪತ್ನೀಕ ಸಸುತ ವಸ್ವಂತ ...... ಶ್ರೀ ಪ್ರದ್ಯುಮ್ನ

೧೮. ಆಪ್ತ ಶರ್ಮನ್ ಗೋತ್ರ ಸಪತ್ನೀಕ ಸಸುತ ವಸ್ವಂತ....... ಶ್ರೀ ಪ್ರದ್ಯುಮ್ನ

ಇತಿ ಸಂಬುದ್ಧಿ ವಿಚಾರಃ ।

# ವಿಧವಾ ವಿಧುರ ಕರ್ತೃಕ ಶ್ರಾದ್ಧೇ ವಿಶೇಷಃ

ವಿಶ್ವೇದೇವ ವಿಪ್ರಕರೇ ಹೋಮಃ । ಸರ್ವಂ ಸವ್ಯೇನ । ಅನ್ನಂ ದ್ವೇಧಾ ವಿಭಜ್ಯ । ಅಭಿಘಾರ್ಯ । ಸೋಮಾಯ ಪಿತೃಮತೇ ಸ್ವಾಹಾ ನಮಃ । ಪುನಃ ಗೃಹೀತ್ವಾ । ಅಗ್ನಯೇ ಕವ್ಯವಾಹನಾಯ ಸ್ವಾಹಾ ನಮಃ । ಇತಿಹುತ್ವಾ । ಚರುಶೇಷಂ ಪಿತೃಪಾತ್ರೇ ನಿಕ್ಷಿಪೇತ್ । ಇತಿ ವಿಶೇಷಃ ।

# ಅವಿಧವಾ ನವಮೀ ಶ್ರಾದ್ಧ ಸಂಕಲ್ಪಃ ।

ಮಾತೃಪಿತಾಮಹಿ ಪ್ರಪಿತಾಮಹೀನಾಂ ದಾನಾಂ ಗೋತ್ರಾಣಾಂ ವಸು...... ವಾಸುದೇವಾನಾಂ ಅವಿಧವಾ ನವಮೀ ಶ್ರಾದ್ಧಕರ್ಮ ಕರಿಷ್ಯಮಾಣಃ ಇತ್ಯಾದಿ ।

ಅವಿಧವಾ ನವಮೀ ಶ್ರಾದ್ಧಂ ಅನುಪನೀತೇನ ಗರ್ಭಿಣೀ ಪತಿನಾಪಿ ಸಪಿಂಡಕಂ ಕಾರ್ಯಮಿತಿ । ತಥಾ ಜೀವತ್‌ಪಿತೃಕೇಣಾಪಿ ಕಾರ್ಯಮ್ । ಇತಿ ಶ್ರಾದ್ಧಮಂಜರ್ಯಾಂ ಧರ್ಮಸಿಂಧಾವಪ್ಯುಕ್ತಮ್ ।

ಭರಣೀ ಶ್ರಾದ್ಧಂ ಅಪಿಂಡಕಂ ಷಡ್ ದೈವತವ್ ಸಾಂಕಲ್ಪಿಕವಿಧಿನಾ ಕಾರ್ಯಂ । ದೇವಾ ಧುರಿಲೋಚನೌ ಪುರೂರವಾದ್ರವೌ ವಾ ಭರಣೀ ಶ್ರಾದ್ಧಂ ಕಾಮ್ಯಂ ಗಯಾಶ್ರಾದ್ಧ ಫಲಕಾಮೇನ ಪ್ರತಿವರ್ಷಂ ಕಾರ್ಯವ್ । ಕೇಚಿತ್ ಪಿತ್ರಾದಿ ಮರಣೋತ್ತರಂ ಪ್ರಥಮವರ್ಷೇ ಏವಕುರ್ವಂತಿ ದ್ವಿತೀಯಾದಿ ವರ್ಷೇ ನ ಕುರ್ವಂತಿ ತತ್ರ ಮೂಲಂ ಚಿಂತ್ಯವ್ । ಇತಿ ಧರ್ಮ ಸಿಂಧೌ ।

ಅಪರಪಕ್ಷಶ್ರಾದ್ಧೇ ಯಾ ತಿಥಿರ್ಯಸ್ಯ ಮಾಸಸ್ಯ ಮೃತಾಹೇತು ಪ್ರವರ್ತತೇ । ಸಾ ತಿಥಿಃ ಪಿತೃಪಕ್ಷೇ ತು ಪೂಜನೀಯಾಃ ಪ್ರಯತ್ನತಃ ।

## ಅಥ ಕನ್ಯಾಗತೇ ಕೃಷ್ಣಾಯಾತ್ರಾವಿಧಿಃ

ಸ್ಮರಣಾತ್ ಕಿಲ್ಬಿಷಂ ಹಂತಿ ದರ್ಶನಾತ್ ಸರ್ವಕಾಮದಾ ।
ನಮಸ್ಕಾರಾತ್ ಭವೇತ್ಪುಷ್ಟಿಃ ಸ್ನಾತ್ವಾಚ ಪರಮಂ ಪದವ್ ॥

ನಾರೀಕೇಲ ಫಲಪುಷ್ಪಾಕ್ಷತ ದಕ್ಷಿಣಾಶ್ಚ ಗೃಹೀತ್ವಾ ಪುರತಃ ಸಂಸ್ಥಾಪ್ಯ । ಅಂಜಲೌ ಪುಷ್ಪಾಕ್ಷತಾನ್ ಗೃಹೀತ್ವಾ ಪ್ರಾರ್ಥಯೇತ್ ।

ನಮಾಮಿ ಗಂಗೇ ತವಪಾದ ಪಂಕಜಂ
ಸುರಾಸುರೈರ್ವಂದಿತದಿವ್ಯರೂಪವ್ ।
ಭುಕ್ತಿಂ ಚ ಮುಕ್ತಿಂ ಚ ದದಾಸಿ ನಿತ್ಯಂ
ಭಾವಾನುಸಾರೇಣ ಸದಾ ನರಾಣಾವ್ ॥
ನಮಾಮಿ ಸುಕೃತ ಶ್ರೇಣೀಂ ಕೃಷ್ಣವೇಣೀಂ ತರಂಗಿಣೀಂ ।
ಯದ್ವೀಕ್ಷಣಂ ಕೋಟಿಜನ್ಮಕೃತ ದುಷ್ಕರ್ಮ ಶಿಕ್ಷಣವ್ ॥
ಪುಷ್ಪಾಕ್ಷತಾನ್ ಸಮರ್ಪ್ಯ ದಂಡವತ್ ಪ್ರಣಾಮಂ ಕುರ್ಯಾತ್ ।

ಸಪತ್ನೀಕಃ ಆಚಮ್ಯ ಕೃಷ್ಣಾಯಾಂ ಸಚ್ಚೈಲಂ ಓಂ ಇತ್ಯುಚ್ಚಾರ್ಯ ಸ್ನಾಯಾತ್ । ಆಪೋಹಿಷ್ಠೇತಿ ತೃಚೇನಮಾರ್ಜಯಿತ್ವಾ । ಆಚಮ್ಯ ಗಾಯತ್ರ್ಯಾ ಮಲಸ್ನಾನಂ ಕೃತ್ವಾ ತೀರಮಾಗತ್ಯ । ನಿರ್ಮಾಲ್ಯ ತೀರ್ಥಂ ಪೀತ್ವಾ ಧಾರಯೇತ್ । ಆಚಮ್ಯ ಶಿಖಾಂ ಬಧ್ವಾ । ನಾಮಮುದ್ರಾಃ ಧಾರಯಿತ್ವಾ । ಪುನಃ ಆಚಮ್ಯ ।

ಪವಿತ್ರಂತೇ ವಿತತಂ ಬ್ರಹ್ಮಣಸ್ಪತೇ . ....ಇತಿ ಮಂತ್ರೇಣ ಪವಿತ್ರಂ ಧೃತ್ವಾ । ಬ್ರಹ್ಮದಂಡಂ ಗೃಹೀತ್ವಾ । ಸಮಸ್ತ ಸಂಪತ್ಸಮವಾಪ್ತಿ ಹೇತವಃ .... ..... ಇತಿ ತ್ರಿಃ ಪ್ರದಕ್ಷಿಣಂ ಕೃತ್ವಾ । ವಿಪ್ರಾಣಾಂ ಪುರತಃ ಸ್ಥಿತ್ವಾ ಪ್ರಣಮೇತ್ ।

ಆಚಮ್ಯ ಅದ್ಯಪೂರ್ವೋಚ್ಚರಿತ . .....ಏವಂಗುಣ ಪುಣ್ಯತಿಥೌ ಶ್ರೀವಿಷ್ಣು ಪ್ರೀತ್ಯರ್ಥಂ ಗ್ರಾಮಾದಾರಭ್ಯ ಶ್ರೀಕೃಷ್ಣವೇಣೀ ಪರ್ಯಂತಂ । ಕನ್ಯಸ್ಥಿತೇ ದೇವಗುರೌ ಕೃಷ್ಣಾ ಭಾಗೀರಥೀ ಯಾತ್ರಾ ಪರಿಪೂರ್ಣತಾ ಸಿಧ್ಯರ್ಥಂ ಮಮಸಮಸ್ತ ಪಿತೄಣಾಂ ಆತ್ಮನಃ ಶುಧ್ಯರ್ಥಂ ಪುಣ್ಯಲೋಕಾವಾಪ್ತ್ಯರ್ಥಂ ಅಧಿಕಾರಸಿಧ್ಯರ್ಥಂಕೇಶಶ್ಮಶ್ರುಲೋಮನಖಾನಿ ವಾಪಯಿಷ್ಯೇ। ಇತಿ ಸಂಕಲ್ಪ್ಯ ।

ಅಪಸವ್ಯಂ । ಸಮಸ್ತ ಪಿತೃ ಪಿತಾಮಹ ಪ್ರಪಿತಾಮಹಾನಾಂ ಶರ್ಮಣಾಂ ಗೋತ್ರಾಣಾಂ ವಸುರುದ್ರಾದಿತ್ಯಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನ ಸಂಕರ್ಷಣ ವಾಸುದೇವಾನಾಂ ಇತ್ಯುಚ್ಚಾರ್ಯ । ಕ್ಷೌರಸ್ಯಾಧಿಕಾರೋಸ್ತ್ವಿತಿ ಭವಂತೋ ಬ್ರುವಂತು । ಅಧಿಕಾರೋಽಸ್ತು । ಇತಿ ।

ಆಜ್ಞಾಂ ಗೃಹೀತ್ವಾ ಶ್ಲೋಕದ್ವಯಂ ಪಠೇತ್ । ಆತ್ಮನಃ ಶುದ್ಧಿಕಾಮೋವಾ ಪಿತೄಣಾಂ ಮುಕ್ತಿಹೇತವೇ । ವಪನಂ ಕಾರಯಿಷ್ಯಾಮಿ ಕೃಷ್ಣೇಹಂ ತವ ಸನ್ನಿಧೌ ॥ ಯಾನಿಕಾನಿಚ ಪಾಪಾನಿ ಬ್ರಹ್ಮಹತ್ಯಾದಿಕಾನಿಚ । ಕೇಶಾನಾಶ್ರಿತ್ಯ ತಿಷ್ಠಂತಿ ತಸ್ಮಾತ್ ಕೇಶಾನ್ ವಪಾಮ್ಯಹಂ ॥ ಸುಕ್ಷೌರಮಸ್ತು ಇತಿವಿಪ್ರಾಃ ।

ಉದಙ್ ಮುಖೋವಾ ವಪನಂ ಕಾರಯೇದಿತ್ಯಪರಾರ್ಕೇ ಉದಙ್ ಮುಖೋವಾ ಉಪವಿಶ್ಯ ಕಕ್ಷೋಪಸ್ಥವರ್ಜ್ಯಮ್। ವಾಪಯೇತ್ ಇದಂವಪನಂ ಶ್ಮಶ್ರುಕೇಶ ಕ್ರಮೇಣ ಕಾರ್ಯಮ್ । ತತ್ರಪ್ರೃದೇ

ಸಂಸ್ಥಂ ದಕ್ಷಿಣಶ್ಮಶ್ರುಕೇಶ ಕ್ರಮೇಣ ಕಾರ್ಯಮಿತ್ಯೇಕೇ ।* ತೀರ್ಥೇಷು ವಪನಂ ಕಾರ್ಯಂ ಕಕ್ಷೋಪಸ್ಥಂಚ ವರ್ಜಯೇತ್ ಇತಿ । ದಂತಾನ್ ಸಂಶೋಧ್ಯ ಸ್ನಾಯಾತ್ ।

ತತಃ ಸ್ನಾತ್ವಾ । ಅದ್ಯಪೂರ್ವೋಚ್ಚರಿತ ಶ್ರೀ ವಿಷ್ಣುಪ್ರೀತ್ಯರ್ಥಂ ಕನ್ಯಸ್ಥೇ ದೇವಗುರೌ ಕೃಷ್ಣವೇಣ್ಯಾಂ (ಕಾಶ್ಯಾದಿ ಪುಣ್ಯಕ್ಷೇತ್ರೇಚ) ಜನ್ಮ ಪ್ರಭೃತಿ ಏತತ್ಕ್ಷಣ ಪರ್ಯಂತಂ ಇತ್ಯಾದಿ . ಮಹಸಂಕಲ್ಪಃ । ಅನ್ಯತ್ರ ವಿಸ್ತರಪ್ರಯೋಗೇ ಆಲೋಚನೀಯಮ್ ।

ಸಂಕ್ಷಿಪ್ತ ಸಂಕಲ್ಪಃ । ಶ್ರೀ ವಿಷ್ಣುಪ್ರೀತ್ಯರ್ಥಂ ಕನ್ಯಸ್ಥೇ ದೇವಗುರೌ ಕೃಷ್ಣವೇಣ್ಯಾಂ ಭಾಗೀರಥ್ಯಾದಿ ಸಾರ್ಧತ್ರಿಕೋಟಿ ತೀರ್ಥಸಮಾಗಮೇ ತೀರ್ಥಸ್ನಾನಾದಿ ಕಲ್ಪೋಕ್ತ ಫಲಾವಾಪ್ತ್ಯರ್ಥಂ ಅಸ್ಯಾಂ ಮಹಾನದ್ಯಾಂ ಶ್ರೀ ಸೀತಾಪತೇ ಶ್ರೀರಾಮಚಂದ್ರ ಪ್ರೀತ್ಯರ್ಥಂ ಕೃಷ್ಣಾಭಾಗೀರಥೀ ಸ್ನಾನ ಮಹಂ ಕರಿಷ್ಯೇ । ಇತಿ ಸಂಕಲ್ಪ್ಯ ।

ಗಂಗಾ ಗಂಗೇತಿ ಯೋ ಬ್ರೂಯಾದ್ಯೋಜನಾನಾಂ ಶತೈರಪಿ । ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸಗಚ್ಛತಿ।ಇತಿಸ್ನಾಯಾತ್ । ಯಾಃ ಪ್ರವತೋವಸಿಷ್ಠೋನದ್ಯಃ ಶಕ್ವರೀ ನದೀಪ್ರಾರ್ಥನೇ ವಿನಿಯೋಗಃ । ಓಂ ಯಾಃಪ್ರವತೋ ನಿವತ ಉದ್ವತ ಉದನ್ವತೀರನುದಕಾಶ್ಚಯಾಃ। ತಾ ಅಸ್ಮಭ್ಯಂ ಪಯಸಾ ಪಿನ್ವಮಾನಾ ಶಿವಾ ದೇವೀರಶಿಪದಾ ಭವಂತು । ಸರ್ವಾ ನದ್ಯೋ ಅಶಿಮಿದಾ ಭವಂತು । ಇತಿ ಪ್ರಾರ್ಥ್ಯ ।

ನಮಃ ಕಮಲನಾಭಾಯ ನಮಸ್ತೇ ಜಲಶಾಯಿನೇ । ನಮಸ್ತೇಸ್ತು ಹೃಷೀಕೇಶ ಗೃಹಾಣಾರ್ಘ್ಯಂ ನಮೋಸ್ತುತೇ ॥ ೧ ॥ ಏಹಿಸೂರ್ಯ ಸಹ ಸ್ರಾಂಶೋ ತೇಜೋರಾಶೇ ಜಗತ್ಪತೇ। ಅನುಕಂಪ ಯಮಾಂ ಭಕ್ತ್ಯಾ ಗೃಹಾ ಣಾರ್ಘ್ಯಂ ನಮೋಸ್ತುತೇ ॥೨॥ ಕೃಷ್ಣೇಕೃಷ್ಣಾಂಗಸಂಭೂತೇ ಜಂತೂನಾಂ ಪಾಪಹಾರಿಣಿ। ನಮಾಮಿ ಸಲಿಲಶ್ರೇಷ್ಠೇ ಗೃಹಾಣಾರ್ಘ್ಯಂ ನಮೋಸ್ತುತೇ ಇತಿ ಮಂತ್ರತ್ರಯೇಣ ಅರ್ಘ್ಯತ್ರಯಂ ದದ್ಯಾತ್ ।

---

*ಇದಂ ಕೇಶವಾಪನಂ ಶಿಖಾಮಾರಭ್ಯ ಅಧಸ್ತಾತ್ ಕಾರ್ಯಮ್ ಇತಿ ।

ದಶವಿಧ ಸ್ನಾನಾನಿ ಕುರ್ಯಾತ್ । ಆದೌ ಮೃತ್ತಿಕಾ ಸ್ನಾನಮಹಂ ಕರಿಷ್ಯೇ । ತುಲಸೀ ಮೃತ್ತಿಕಾಂ ಗೃಹೀತ್ವಾ ವರಾಹಮೂರ್ತಿಂ ಸ್ಮೃತ್ವಾ । ಉದ್ಧೃತೇತಿ ಮಂತ್ರೇಣ ಮೃತ್ತಿಕಾಸ್ನಾನಂ । ಋತಂಚೇತಿ ಮಂತ್ರ ತ್ರಯೇಣ ಅಘಮರ್ಷಣಂ।ಬೃಹಸ್ಪತಿಃ ಸುರಾಧ್ಯಕ್ಷಸರ್ವದೇವ ನಮಸ್ಕೃತಃ । ಗೃಹಣಾರ್ಘ್ಯಂ ಮಯಾದತ್ತಂ ಕನ್ಯಸ್ಥೇ ಭಾರ್ಯಯಾಸಹ । ಇತ್ಯರ್ಘ್ಯಂ ದದ್ಯಾತ್ ।

ಗಂಗಾ ಗಂಗೇತಿಯೋ ಬ್ರೂಯಾ.... ಗಚ್ಛತಿ । ಇತಿಸ್ನಾಯಾತ್ । ಪುನಃ ಓಂ ನಮೋ ಭಗವತೇ ವಾಸುದೇವಾಯ । ಓಂ ನಮೋ ನಾರಾಯಣಾಯ । ಓಂ ವಿಷ್ಣವೇ ನಮಃ । ಓಂ ಹರಯೇ ನಮಃ ಇತ್ಯುಚ್ಚಾರ್ಯ ಸ್ನಾಯಾತ್ । ನಿರ್ಮಾಲ್ಯತೀರ್ಥಂಪೀತ್ವಾ ಶಿರಸಿಧಾರಯೇತ್ ।

ಸ್ನಾನಾಂಗ ತರ್ಪಣಂ ಕುರ್ಯಾತ್ । ಉಪವೀತಿ । ಬ್ರಹ್ಮಾದಯೋ ಯೇ ದೇವಾಃ । ತಾಂ ದೇವಾಂಸ್ತರ್ಪಯಾಮಿ । ಭೂರ್ದೇವಾಂ . . . ಭುವರ್ದೇವಾಂ ಸ್ವರ್ದೇವಾಂ ಭೂರ್ಭುವಸ್ವರ್ದೇವಾಂ ಸ್ತರ್ಪಯಾಮಿ। ನಿವೀತಿ । ಕೃಷ್ಣದ್ವೈಪಾಯನಾದಯೋ ಯೇ ಋಷಯಃ । ತಾನ್ ಋಷೀಂ ಸ್ತರ್ಪಯಾಮಿ। ಭೂಋಷೀಂಸ್ತ ಭುವಋಷೀಂ ಸ್ವರ್‌ಷೀಂ.... ಭೂರ್ಭುವಸ್ವಋರ್ಷೀಂಸ್ತರ್ಪಯಾಮಿ ।

ಪ್ರಾಚೀನಾವೀತಿ ಸೋಮಃ ಪಿತೃಮಾನ್ಯಮೋಂಗಿರಸ್ವಾನಗ್ನಿಷ್ವಾತ್ತಾ ಅಗ್ನಿಂ ಕವ್ಯವಾಹನಾದಯೋ ಯೇಪಿತರಃ । ತಾನ್ ಪಿತೄಸ್ತರ್ಪಯಾಮಿ । ಭೂಃಪಿತೄ ಸ್ತರ್ಪಯಾಮಿ । ಭುವಃ ಪಿತೄ ..ಸ್ವಃ ಪಿತೄ... ಭೂರ್ಭುವಸ್ವಃ ಪಿತೄಸ್ತರ್ಪಯಾಮಿ।ಅಗ್ನಿದಗ್ಧಾಶ್ಚಯೇ ಜೀವಾಯೇಪ್ಯದಗ್ಧಾಃ ಕುಲೇಮಮ । ಭೂಮೌದತ್ತೇನ ತೋಯೇನ ತೃಪ್ತಾಯಾಂತು ಪರಾಂ ಗತಿ । ಇತಿ ಜಲಾಂಜಲಿಂ ತಟೇನಿಕ್ಷಿಪ್ಯ ।

ಶಿಖೋದಕಂ ಭೂಪತಿತಂ ....ಮುಕ್ತಿಹೇತವೇ । ಶಿಖೋದಕಂ ದದ್ಯಾತ್ । ಯನ್ಮಯಾ ದೂಷಿತಂ ತೋಯಂ ಯಕ್ಷ್ಮಾಣಂ ತರ್ಪಯಾಮ್ಯಹಂ । ಯಕ್ಷ್ಮಣಾ ತರ್ಪಣಂ । ಜ್ಞಾನತೋಽಜ್ಞಾನತೋ ವಾಪಿ ..... ಜಗನ್ಮಾತರ್ನಮೋಸ್ತುತೇ । ಇತಿ ನದೀಂ ಪ್ರಾರ್ಥಯೇತ್ ।

ತತಃ ಸಂಧ್ಯಾದಿ ನಿತ್ಯಕರ್ಮಂ ಕೃತ್ವಾ । ಗೃಹಮಾಗತ್ಯ । ಯಥಾ ಶಕ್ತ್ಯುಪವಸೇತ್ । ಪರೇದ್ಯುಃ ಸಂಕಲ್ಪ ಪೂರ್ವಕಂ ಸ್ನಾತ್ವಾ ಸ್ನಾನಾಂಗ ತರ್ಪಣಂ ಕೃತ್ವಾ । ಸಂಧ್ಯಾಬ್ರಹ್ಮ ಯಜ್ಞ, ವೈಶ್ವದೇವಂ ಕೃತ್ವಾ । ಪೂರ್ವಂ ತೀರ್ಥ ಶ್ರಾದ್ಧಾಂಗ ತಿಲತರ್ಪಣಂ ಚ ಕೃತ್ವಾ । ತೀರ್ಥ ಶ್ರಾದ್ಧಂ ಕುರ್ಯಾತ್ ।

## ಅಥ ತೀರ್ಥ ಶ್ರಾದ್ಧ ವಿಧಿಃ ।

ದ್ವಿರಾಚಮ್ಯ । ಪವಿತ್ರಂತೇ ಇತಿ ಪವಿತ್ರಂ ಧೃತ್ವಾ । ಪ್ರಾಣಾ ನಾಯಮ್ಯ । ದೇಶಕಾಲೌ ಸಂಕೀರ್ತ್ಯ । ಪುಣ್ಯತಿಥೌ । ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀವಿಷ್ಣುಪ್ರೀತ್ಯರ್ಥಂ । ಧುರಿಲೋಚನ ಸಂಜ್ಞ ಕಾನಾಂ ವಿಶ್ವೇಷಾಂ ದೇವಾನಾಂ ।

ಪ್ರಾಚೀನಾವೀತಿ । ಅಸ್ಮತ್ ಸಮಸ್ತ ಪಿತೃಪಿತಾಮಹ ಪ್ರಪಿತಾಮ ಹಾನಾಂ ಶರ್ಮಣಾಂ ಗೋತ್ರಾಣಾಂ ವಸು ರುದ್ರಾದಿತ್ಯಾಂತರ್ಗತ ಪ್ರದ್ಯುಮ್ನ ಸಂಕರ್ಷಣ ವಾಸುದೇವಾನಾಂ ಕನ್ಯಸ್ಥೇ ದೇವಗುರೌ ಕೃಷ್ಣ ವೇಣ್ಯಾಂ ಭಾಗೀರಥ್ಯಾದಿ ಸಾರ್ಧ ತ್ರಿಕೋಟಿತೀರ್ಥ ಸಮಾಗಮ ಪ್ರಯುಕ್ತ ತೀರ್ಥ ಶ್ರಾದ್ಧಕರ್ಮ ಕರಿಷ್ಯಮಾಣಃ ಇತ್ಯಾದಿ । ಶೇಷಂ ಸರ್ವಂ ಪಾರ್ವ ಣವತ್ ।

ತತ್ರ ಗಂಗಾದಿ ಸರ್ವತೀರ್ಥ ಪ್ರಾಪ್ತೌ ಅರ್ಘ್ಯ ಮಾವಾಹನಂ ಚೈವ ದ್ವಿಜಾಂಗುಷ್ಠ ನಿವೇಶನಮ್ । ತೃಪ್ತಿ ಪ್ರಶ್ನಂ ಚವಿಕಿರಂ ತೀರ್ಥೇ ಷಂಚ ವಿವರ್ಜಯೇತ್ । ಸಕೃನ್ ಮಹಾಲಯವತ್ ಸಮಸ್ತ ಪಿತೃಗಣೋದ್ದೇ ಶೇನ ಧುರಿಲೋಚನ ವಿಶ್ವೇದೇವ ಸಹಿತಂ ತೀರ್ಥ ಶ್ರಾದ್ಧಂ ಕುರ್ಯಾತ್ । ಅಗ್ನೌಕರಣಂ ಕೃತಾಕೃತಂ । ಕರಣ ಪಕ್ಷೇ ತೀರ ಸಮೀಪೇ ಶ್ರಾದ್ಧಂ ಚೇತ್ತದಾ ತೀರ್ಥಜಲೇ ಕಾರ್ಯಮ್ ।

ಪರೇದ್ಯುಃ ಆಚಮ್ಯ ಪ್ರಾಣಾನಾಯಮ್ಯ ಸುಮುಖಶ್ಚೇತ್ಯಾದಿ . . ದೇಶಕಾಲ ಕಥನಾಂತೇ ಮಮ ಆತ್ಮನಃ ಶ್ರುತಿಸ್ಮೃತಿ ಪುರಾಣೋಕ್ತ ಫಲ ಪ್ರಾಪ್ತ್ಯರ್ಥಂ ಸಕುಟುಂಬಾನಾಂ ಕ್ಷೇಮಸ್ಥೈರ್ಯ ಐಶ್ವರ್ಯಾಯುರಾ

ರೋಗ್ಯಾದ್ಯಭೀಷ್ಟ ಸಿಧ್ಯರ್ಥಂ ಕೃಷ್ಣಾಯಾತ್ರಾ ಸಂಪೂರ್ಣ ಫಲಾವಾಪ್ತ್ಯರ್ಥಂ ಬೃಹಸ್ಪತಿಪೂಜಾಂ ಕೃಷ್ಣಾಭಾಗೀರಥೀ ಪೂಜನಂ ಚಕರಿಷ್ಯೇ ಇತಿ ಸಂಕಲ್ಪ್ಯ |

ಆದೌ ನಿರ್ವಿಘ್ನತಾ ಸಿಧ್ಯರ್ಥಂ ಗಣಪತಿ ಪೂಜನಂ ಪಂಚವಾಕ್ಯೈಃ ಪುಣ್ಯಾಹವಾಚನಂ ಚ ಕರಿಷ್ಯೇ | ಮಹ್ಯಂ ಸಕುಟುಂಬಿನೇ ಮಹಾಜನಾನ್ನಮಸ್ಕುರ್ವಾಣಾಯ ಇತ್ಯಾದಿ . | ಅದ್ಯ ಕರ್ಮಕರಿಷ್ಯಮಾಣಃ ಬೃಹಸ್ಪತಿ ಗಂಗಾಪೂಜಾಂಗ ಕೃಷ್ಣಾಯಾತ್ರಾ ಸಂಪೂರ್ಣತಾ ಸಿದ್ಧಿಕರ್ಮಣಃ ಪುಣ್ಯಾಹಂ ಭವಂತೋ ಬ್ರುವಂತು | ಏವಂ ಸ್ವಸ್ತಿ . ಋದ್ಧಿ . ಶ್ರೀ.... ... ಕಲ್ಯಾಣಂ ಪಂಚವಾಕ್ಯ ಪುಣ್ಯಾಹಂ ವಾಚಯಿತ್ವಾ |

ಪ್ರಸ್ಥ ಪರಿಮಿತ ತಂಡುಲ ಪುಂಜೋಪರಿ ನೂತನವಸ್ತ್ರೇ ಅಷ್ಟದಲ ಪದ್ಮಂವಿಲಿಖ್ಯ |ತತ್ರ ಯಥಾ ಶಕ್ತಿ ಸುವರ್ಣ ನಿರ್ಮಿತ ಬೃಹಸ್ಪತಿಪ್ರತಿಮಾಂ ತದಸ್ತುಗೃಹಾವ್ಯೈ ಇತಿ ಸ್ಥಾಪ್ಯ | ಬೃಹಸ್ಪತೇ ಇತಿ ಮಂತ್ರೇಣ ಆವಾಹನಾದಿ ಷೋಡಶೋಪಚಾರೈಃ ಸಂಪೂಜ್ಯ |ಅರ್ಘ್ಯಂ ದದ್ಯಾತ್ | ಬೃಹಸ್ಪತಿ ಸುರಾಧ್ಯಕ್ಷ ಸರ್ವದೇವನಮಸ್ಕೃತ ಗೃಹಾಣಾರ್ಘ್ಯಂ ಮಯಾದತ್ತಂ ಕನ್ಯಸ್ಥೋ ಭಾರ್ಯಯಾ ಸಹ | ಫಲಾಕ್ಷತ ಸಹಿತಂ ಅರ್ಘ್ಯಂದತ್ವಾ | ಪ್ರಾರ್ಥಯೇತ್ | ಜೀವೋಽಸಿ ಜೀವರೂಪೋಽಸಿ ಕನ್ಯಸ್ಥೋಽಸಿ ಸುರಾರ್ಚಿತ | ಬೃಹಸ್ಪತೇ ನಮಸ್ತುಭ್ಯಂ ಪಾಪಂಮೇ ಮೋಚಯಪ್ರಭೋ|ಇತಿ ಪ್ರಾರ್ಥ್ಯ ಯಸ್ಯಸ್ಮೃತ್ಯೇತಿ ಪೂಜಾಂ ಸಮಾಪಯೇತ್ |

ಅಥ ಗಂಗಾಪೂಜಾ | ಆಚಮ್ಯ ಪ್ರಾಣಾನಾಯಮ್ಯ ಶುಭತಿಥೌ .. ಶ್ರೀವಿಷ್ಣು ಪ್ರೀತ್ಯರ್ಥಂ ಸಕಲ ಶ್ರುತಿಸ್ಮೃತಿ ಪುರಾಣೋಕ್ತ ಫಲಪ್ರಾಪ್ತ್ಯರ್ಥಂ ಶ್ರೀಕೃಷ್ಣಾ ಭಾಗೀರಥೀ ಪೂಜಾಂಕರಿಷ್ಯೇ | ನೂತನ ಕಲಶೇ ಕೃಷ್ಣಾಜಲಂ ಪ್ರಪೂರ್ಯ | ತಂಡುಲರಾಶ್ಯುಪರಿ ನಿಧಾಯ | ಮಹೀದ್ಯೌರಿತ್ಯಾದಿ ಪೂರ್ಣಪಾತ್ರ ನಿಧಾನಾಂತಂ ಕೃತ್ವಾ | ಇಮಂಮೇ ಗಂಗೇ ಇತಿ ಮಂತ್ರೇಣ ಆವಾಹನಾದಿ ಷೋಡಶೋಪಚಾರೈಃ ಚ ಸಮ್ಯಕ್ ಪ್ರಪೂಜ್ಯ | ಪ್ರಾರ್ಥಯೇತ್ | ಕೃಷ್ಣಾಗಂಗೇ ನಮೋ ದೇವ್ಯೈ ಶಿವಾಯೈ ಸತತಂ ನಮಃ | ಪಾಹಿ ಪಾಹಿ ನಮೋ ಕೃಷ್ಣೇ ತ್ವತ್ಪಾದ ಶರಣಾಗತ | ಇತಿ ಪ್ರಾರ್ಥ್ಯ |

ತತೋ ಯಜಮಾನಸ್ಯಾಭಿಷೇಕಂ ಸಮುದ್ರ ಜ್ಯೇಷ್ಠಾ ಇತ್ಯಾದಿ ಮಂತ್ರೈಃ ಕುರ್ಯಾತ್ । ಅಭಿಷೇಕ ವಸ್ತ್ರಂ ಬೃಹಸ್ಪತಿ ಪ್ರತಿಮಾ ಸದಕ್ಷಿಣಾಂ ಪುರೋಹಿತಾಯ ದದ್ಯಾತ್। ಅನ್ಯೇಭ್ಯೋ ಬ್ರಾಹ್ಮಣೇಭ್ಯಃ ಗೋಭೂ ತಿಲಹಿರಣ್ಯ ವಸ್ತ್ರಾದಿದಾನಾನಿ ಯಥಾ ಶಕ್ತಿದತ್ವಾ ।

ಬೃಹಸ್ಪತಿ ಪ್ರೀತಯೇ ಪೀತ ವಸ್ತ್ರಯುಗಲಂಯಜ್ಞೋಪವೀತಯುತಂ ಛತ್ರ ಪಾದುಕಾಂಪುಸ್ತಕಂ ಇತ್ಯಾದೀನಿ ದದ್ಯಾದಿತಿ । ಯಸ್ಯಸ್ಮೃತ್ಯೇತಿ ಪೂಜಾಫಲಂ ಶ್ರೀವಿಷ್ಣವೇ ಸಮರ್ಪ್ಯ ಸಮಾಪಯೇತ್ । ಯಥಾಶಕ್ತಿ ಬ್ರಾಹ್ಮಣಾನ್ ಭೋಜಯೇತ್ ।

# ಅಥ ಕನ್ಯಾಗತೇ ಕೃಷ್ಣಾಯಾತ್ರಾವಿಧೌ ಉಪಯುಕ್ತ ಶ್ಲೋಕಾ:

ಗಚ್ಛಂತು ಸಹಿತೋ ದೇವೈಃ ಕೃಷ್ಣಾಸ್ನಾನಾರ್ಥ ಮುದ್ಯತಃ । ಆಯಾಂತು ಪಿತರಃ ಸರ್ವೇಯೇ ಮರ್ತ್ಯಾಃ ಶ್ರಾದ್ಧಕಾಂಕ್ಷಿಣಃ। ಯಾಸ್ಯಾಮಃ ಕೃಷ್ಣಾ ಗಂಗಾಯಾಂ ಕನ್ಯಾ ಸಂಸ್ಥೇ ಬೃಹಸ್ಪತೌ ।

ಮನೋವಾಕ್ಕಾಯಜೈರ್ಗ್ರಸ್ತೈಃ ಪಾಪೈರ್ಬಹುವಿಧೈರಪಿ । ವೀಕ್ಷ್ಯ ಕೃಷ್ಣಾಂ ಭವತ್ಪೂತಃ ಪುರುಷೋ ನಾತ್ರ ಸಂಶಯಃ ।

ನವಾರಂ ನಚ ನಕ್ಷತ್ರಂ ನಕಾಲಸ್ತತ್ರಕಾರಣಂ । ಯದೈವ ದೃಶ್ಯತೇ ತೀರ್ಥಂ ತದಾ ಪರ್ವ ಸಹಸ್ರಕಂ । ಇದಂ ತೀರ್ಥ ನಿಮಿತ್ತಕಂ ಶ್ರಾದ್ಧಂ ದಶಮಾಸಾನಂತರಂ ತೀರ್ಥ ಪ್ರಾಪ್ತಾವಾವಶ್ಯಕಂ।ಅಂತರಾ ತತ್ಫಲೇಚ್ಛಯಾ ಕೃತಾಕೃತಂ । ಗೌತಮ್ಯಾಂ ಕೃಷ್ಣವೇಣ್ಯಾಂ ಚ ಸಿಂಹ ಕನ್ಯಾಗತೇಗುರೌ । ವಿವಾಹೇ ಗರ್ಭಿಣೀ ಪತ್ಯುರ್ವಪನಂತು ಪ್ರಶಸ್ಯತೇ । ಯಾವನ್ಮುಂಡನ ಪರ್ಯಂತಂ ತಾವದೇವಾಸ್ತು ಸೂತಕಮ್ ।

ಕಾತ್ಯಾಯನಃ । ಕನ್ಯಾಯಾಂ ಕೃಷ್ಣಾಯಾತ್ರಾಯಾಂ ವಪನಂ ಪಿಂಡದಾನಕಂ । ಪುತ್ರಃ ಕುರ್ವೀತ ಭಕ್ತ್ಯಾಚ ಪಿತೄನುದ್ದಿಶ್ಯ ದೇವತಾಃ ತೀರ್ಥೇಷು ವಪನಂ ಕಾರ್ಯಂ ಕಕ್ಷೋಪಸ್ಥಂ ಚ ವರ್ಜಯೇತ್ ।

ತಿಸ್ರಃ ಕೋಟ್ಯರ್ಧ ಕೋಟ್ಯಸ್ತು ತೀರ್ಥಾನಿ ಭುವನತ್ರಯೇ ।
ಆಯಾಂತು ಕೃಷ್ಣವೇಣ್ಯಾಯಾಂ ಕನ್ಯಾಯುಕ್ತೇ ಬೃಹಸ್ಪತೌ ।

ಯದಹ್ನಿ ತೀರ್ಥಪ್ರಾಪ್ತಿಃ ಸ್ಯಾತ್ತದಹ್ನಿ ಉಪವಾಸಃ । ಕಲ್ಪೋಕ್ತಃ। ಪೂರ್ವವಾಸರೇ ಉಪವಾಸಂ । ಪ್ರಕಲ್ಪ್ಯ ಪ್ರಾಪ್ತೇಽಹ್ನಿ ಶ್ರಾದ್ಧಕೃದ್ಭವೇತ್। ಅನ್ಯಚ್ಚ । ಉಪವಾಸಂ ಕರಿಷ್ಯಾಮಿ ಕೃಷ್ಣೇಽಹಂ ತವ ಸನ್ನಿಧೌ ।

ಇತಿ ಕನ್ಯಾಗತೇ ಕೃಷ್ಣಾಯಾತ್ರಾವಿಧಿಃ ।

# ಶ್ರಾದ್ಧ ವಿಷಯೋಪಯುಕ್ತ ಸ್ಮೃತಿ ಪುರಾಣ ಗ್ರಂಥ ವಚನಗಳ ತಾತ್ಪರ್ಯವು

೧. 'ಯಃ ಶ್ರಾದ್ಧ ಕುರುತೇ ವಿಪ್ರಃ 'ವೃದ್ಧ ಹಾರೀತ ಸ್ಮೃತಿ ಶ್ರಾದ್ಧ ಮಾಡುವವನು ಶಾಲಿಗ್ರಾಮ, ಸುದರ್ಶನ, ದೇವರ ಸನ್ನಿಧಾನ ಇಟ್ಟು ಕೊಂಡು ಮಾಡಬೇಕು. ಆ ಶ್ರಾದ್ಧವು ಗಯಾ ಶ್ರಾದ್ಧದ ಆನಂತ್ಯ ಫಲ ವನ್ನು ಕೊಡುತ್ತದೆ

(೨ ಮತ್ತು ೩) 'ಊರ್ಧ್ವಪುಂಡ್ರ ವಿಹೀನಂತು .' ಹಾಗು 'ಚಕ್ರ ಚಿಹ್ನವಿಹೀನಂತು ' —ಸ್ಮೃತಿ ಮುಕ್ತಾವಲೀ

ಯಜಮಾನನು ಸ್ನಾನಾನಂತರ ಊರ್ಧ್ವಪುಂಡ್ರ, ಶಂಖಚಕ್ರಾದಿ ಮುದ್ರೆಗಳನ್ನು ಧರಿಸಿ (ನಿತ್ಯಾಹ್ನಿಕ ಪೂಜಾ ವೈಶ್ವದೇವಾದಿಗಳನ್ನು ಮಾಡಿ) ಕೊಂಡು ಶ್ರಾದ್ಧ ಪ್ರಾರಂಭಿಸಬೇಕು

ಇನ್ನು ಊರ್ಧ್ವಪುಂಡ್ರ, ಚಕ್ರಶಂಖಾದಿ ಮುದ್ರೆಗಳನ್ನು ಧಾರಣ ಮಾಡದೆ ಇದ್ದಲ್ಲಿ ಶ್ರಾದ್ಧ ಫಲಾಂಶವು ರಾಕ್ಷಸರಿಂದ ಅಪಹರಿಸಲ್ಪಡುತ್ತದೆ. ಪಿತೃಗಳನ್ನಾದರೂ ನರಕಭಾಜನರನ್ನಾಗಿ ಮಾಡುತ್ತದೆ ಆದ್ದರಿಂದ ಊರ್ಧ್ವಪುಂಡ್ರಾದಿಗಳು ಅತ್ಯವಶ್ಯವಾದವು.

೪ 'ದ್ವಾಭ್ಯಾಂ ಅನಾಮಿಕಾಭ್ಯಾಂತು ... .' —ನಿರ್ಣಯ ಸಿಂಧು ಎರಡೂ ಕೈಗಳಲ್ಲಿ ಕಿರಿ ಬೆರಳುಗಳ ಸಮೀಪದ ಅನಾಮಿಕೆಗಳಲ್ಲಿ

ಪವಿತ್ರಗಳನ್ನು ಧರಿಸಬೇಕು. ಅಥವಾ ಬಲಗೈಯೊಂದರಲ್ಲಿಯೇ ಆಗಲಿ ಪವಿತ್ರ ಧರಿಸಬೇಕು

೫ 'ವಿಷ್ಣ್ವರ್ಚನಂ ವೈಶ್ವದೇವಂ .......' –ಸ್ಮೃತಿಕೌಸ್ತುಭ

ದೇವತಾರ್ಚನ, ವೈಶ್ವದೇವ, ಬ್ರಹ್ಮಯಜ್ಞಾದಿ ಕರ್ಮಗಳನ್ನು ಮಾಡಿಕೊಂಡು ಶ್ರಾದ್ಧಕರ್ಮವನ್ನು ಆರಂಭಿಸಬೇಕು. ಹಾಗೆ ಮಾಡದಿದ್ದಲ್ಲಿ ಪಿತೃಗಳಿಗೆ ರೌರವಾದಿ ನರಕ ಪ್ರಾಪ್ತಿಯೆಂದು ಸ್ಮೃತಿಕಾರರ ಅಭಿಪ್ರಾಯವು.

೬. 'ಋಗ್ಯಜುಃ ಸಾಮಗಾಃ ಸರ್ವೇ . '

–ವೃದ್ಧವಸಿಷ್ಠವಚನ

ಋಗ್, ಯಜುಃ, ಸಾಮವೇದಿಗಳು ಸಕಲ ವೈಷ್ಣವರು ಶ್ರಾದ್ಧದಿನದಲ್ಲಿ ದೇವಪೂಜಾ ವೈಶ್ವದೇವ, ಬ್ರಹ್ಮಯಜ್ಞಾದಿಗಳನ್ನು ಮಾಡಿಯೇ ಶ್ರಾದ್ಧವನ್ನು ಪ್ರಾರಂಭಿಸಬೇಕು

೭. 'ಋಷಿದೈವತಛಂದಾಸಿ ' –ಕೃಷ್ಣಭಟ್ಟೀವಚನ

ಶ್ರಾದ್ಧ ಕಾಲದಲ್ಲಿ ಋಷಿದೈವತ ಛಂದಸ್ಸುಗಳನ್ನು ಉಚ್ಚರಿಸಬಾರದು. ಉಚ್ಚರಿಸಿದ್ದಾದರೆ ಪಿತೃಗಳು ನಿರಾಶರಾಗಿ ಹೊರಟು ಹೋಗುವರು.

೮. 'ಕುಶಹಸ್ತೇನ ಯಜ್ಜಪ್ತಂ.. '

–ಶ್ರಾದ್ಧಕಲ್ಪಲತಾ ಉದ್ಧೃತ

ಪವಿತ್ರಪಾಣಿಯಾಗಿ ಮಾಡಿದ ಜಪ, ದಾನ, ಭೋಜನಾದಿಗಳ ಫಲವು ಅನಂತವಾಗಿದೆ

೯. 'ಸ್ನಾನಂ ದಾನಂ ಜಪೋ ಹೋಮಃ...... '

–ಶ್ರಾದ್ಧಕಲ್ಪಲತಾ ಉದ್ಧೃತ

ಸ್ನಾನ, ದಾನ, ಜಪ, ಹೋಮ, ಅಧ್ಯಯನ, ಶ್ರಾದ್ಧಾದಿಗಳನ್ನು ಮಾಡುವ ಯಜಮಾನನು ಮೈಮೇಲೆ ವಸ್ತ್ರವನ್ನು ಅವಶ್ಯವಾಗಿ ಧರಿಸಬೇಕು ಇಲ್ಲವಾದಲ್ಲಿ ಸಕಲ ಕರ್ಮಗಳೂ ವ್ಯರ್ಥವಾಗುವವು.

೧೦. 'ಆಮ್ರಮಾಮಲಕೀಮಿಕ್ಷುಂ.' —ಶಂಖಸ್ಮೃತಿ

ಮಾವಿನಹಣ್ಣು, ನೆಲ್ಲೀಕಾಯಿ, ಕಬ್ಬು, ದ್ರಾಕ್ಷಿಹಣ್ಣು, ದಾಳಿಂಬ, ಖರ್ಜೂರ, ಬಾಳೆಹಣ್ಣು ಮೊಸರು ಇತ್ಯಾದಿಗಳು ಶ್ರಾದ್ಧ ಭೋಜನದಲ್ಲಿ ಪ್ರಶಸ್ತವಾಗಿದ್ದು ಪ್ರಯತ್ನ ಪೂರ್ವಕ ಸಂಪಾದಿಸಿ ಉಪಯೋಗಿಸಬೇಕು

೧೧ 'ಯಥಾ ಪುಷ್ಕರಪರ್ಣೇಷು .... ' —ಶ್ರಾದ್ಧಕಲ್ಪಲತಾ

ಪವಿತ್ರ ಧಾರಣ ಮಾಡಿದವನು ನೀರಿನಲ್ಲಿರುವ ಕಮಲದೆಲೆಯಂತೆ ಪಾಪಲೇಪವಿಲ್ಲದವನಾಗಿ ಶುದ್ಧನಾಗಿರುವನು

೧೨ 'ಸಂಬಂಧ ನಾಮ ಗೋತ್ರಾಣಿ _ ....' —ಪದ್ಮಪುರಾಣ

ದೇಶ, ಕಾಲ, ತಿಥಿ ಮೊದಲಾದವುಗಳನ್ನು ಉಚ್ಚರಿಸಿ, ಅಪಸವ್ಯದಿಂದ ಪಿತೃಗಳ ಹೆಸರು, ಗೋತ್ರ, ವಸ್ವಾದ್ಯಂತರ್ಯಾಮಿ ಪ್ರದ್ಯುಮ್ನ ಸಂಕರ್ಷಣ ವಾಸುದೇವಾದಿ ರೂಪಗಳನ್ನು ಉಚ್ಚರಿಸಿ ಶ್ರಾದ್ಧ ಸಂಕಲ್ಪವನ್ನು ಮಾಡಬೇಕು.

೧೩. 'ಕೂರ್ಚಂತು ತ್ರಿವಿಧಂ ಪ್ರೋಕ್ತಂ ...... ' —ನಿರ್ಣಯಸಿಂಧು

ದರ್ಶ ಶ್ರಾದ್ಧದಲ್ಲಿ ಐದುದರ್ಭೆಗಳಿಂದಲೂ, ಪ್ರತಿಸಾಂವತ್ಸರಿಕದಲ್ಲಿ ಏಳುದರ್ಭೆಗಳಿಂದಲೂ, ಮಹಾಲಯ ಶ್ರಾದ್ಧದಲ್ಲಿ ಒಂಬತ್ತು ದರ್ಭೆಗಳಿಂದಲೂ ಕೂರ್ಚಗಳನ್ನು ಮಾಡಬೇಕು ಕಾರಣ ಕೂರ್ಚದಲ್ಲಿ ಮೂರು ಪ್ರಕಾರಗಳು.

೧೪ 'ಬ್ರಹ್ಮದಂಡಾರ್ಥಮಾದಾಯ ... ' —ವ್ಯಾಘ್ರಸ್ಮೃತಿ

ಬ್ರಹ್ಮದಂಡಾರ್ಥವಾಗಿ ಹಿರಣ್ಯ, ಕುಶ, ತಿಲ, ಗೋಪಿಚಂದನಗಳನ್ನು ತೆಗೆದುಕೊಂಡು ಬ್ರಾಹ್ಮಣರನ್ನು ಮೂರುಸಲ ಪ್ರದಕ್ಷಿಣ ಮಾಡಬೇಕು. ಪ್ರದಕ್ಷಿಣ ಕಾಲದಲ್ಲಿ 'ಸಮಸ್ತ ಸಂಪತ್' ಇತ್ಯಾದಿ ಮಂತ್ರಗಳನ್ನು ಹೇಳಬೇಕು. ಪುನಃ ಆ ಪದಾರ್ಥಗಳನ್ನು ಬ್ರಾಹ್ಮಣರ ಮುಂದೆ ಇಡಬೇಕು.

೧೫. 'ಗೋಪೀ ಚಂದನ ಖಂಡೋಯಂ . '

—ವ್ಯಾಘ್ರಸ್ಮೃತಿ, ಮಾರ್ಕಾಂಡೇಯಸ್ಮೃತಿ

ಶ್ರಾದ್ಧದಲ್ಲಿ ಗೋಪೀಚಂದನದ ಸಣ್ಣ ತುಣು ಕುಅಥವಾ ಸಾಸಿವೆ ಕಾಳಿನಷ್ಟಾದರೂ ತುಣುಕನ್ನು ಬ್ರಾಹ್ಮಣರಿಗೆ ಕೊಟ್ಟಲ್ಲಿ ಬ್ರಹ್ಮಹತ್ಯಾದಿ ದೋಷಗಳು ನಾಶವಾಗುತ್ತವೆ.

೧೬. 'ವಿಪ್ರೌಘದರ್ಶನಾತ್‌ಕ್ಷಿಪ್ರಂ.... ....'

—ಮಾರ್ಕಂಡೇಯ ಸ್ಮೃತಿ

ಬ್ರಾಹ್ಮಣ ಸಮೂಹ ದರ್ಶನ ಮಾತ್ರದಿಂದಲೇ ಪಾಪ ರಾಶಿಗಳು ಶೀಘ್ರವಾಗಿ ನಾಶಹೊಂದುತ್ತವೆ ನಮಸ್ಕಾರದಿಂದ ಮಂಗಲ ಪ್ರಾಪ್ತಿಯಾ ಗುತ್ತದೆ. ಬ್ರಾಹ್ಮಣ ಪೂಜೆಯಿಂದ ಉತ್ತಮ ಸ್ಥಾನ ಪ್ರಾಪ್ತವಾಗುತ್ತದೆ.

೧೭ 'ಕುಶಪುಷ್ಪತಿಲವ್ರೀಹಿ ....' —ಮಾರ್ಕಂಡೇಯ ಸ್ಮೃತಿ

ದರ್ಭೆ,ಹೂ,ಎಳ್ಳು,ಬತ್ತ, ಆಕಳ ಹಾಲು, ಮೊಸರು,ತುಪ್ಪ, ಬಿಳೀಸಾಸಿವೆ ಹೀಗೆ ಎಂಟು ಪದಾರ್ಥಗಳಿಂದ ಕೂಡಿದ ಉದಕವು (ನೀರು) ಅಷ್ಟಾರ್ಘ್ಯವು ಎಂದು ಹೇಳಲ್ಪಡುತ್ತದೆ.

೧೮ 'ಶ್ರಾದ್ಧೇ ಯಜ್ಞೇ ವಿವಾಹೇ ಚ .. '

—ಸ್ಮೃತಿ ಮುಕ್ತಾವಲಿ

ಶ್ರಾದ್ಧ, ಯಜ್ಞ, ವಿವಾಹ, ಮಧುಪರ್ಕ, ಯೋಗದೀಕ್ಷಾ ಕಾಲಗಳಲ್ಲಿ ಪೂಜ್ಯರಾದ ಗುರುಗಳು ಬಂದಲ್ಲಿ ಕೂಡಿಸಿ ಪಾದ ಪ್ರಕ್ಷಾಲನೆ ಮಾಡಬೇಕು. ಇದಕ್ಕೆ ವಿಪರೀತವಾಗಿ ನಿಲ್ಲಿಸಿ ಮಾಡಿದಲ್ಲಿ ಪಿತೃಗಳು ನಿರಾಶರಾಗಿ ಹೋಗುವರು.

೧೯ 'ಯಜ್ಞೋಪವೀತಂ ದಾತವ್ಯಂ........'

—ಮಾರ್ಕಂಡೇಯ, ಲಾಗಾಕ್ಷಿಸ್ಮೃತಿ

ಶ್ರಾದ್ಧದಲ್ಲಿ ಬ್ರಾಹ್ಮಣರಿಗೂ ಪಿಂಡಕ್ಕೂ ವಸ್ತ್ರಗಳನ್ನು ಕೊಡಬೇಕು. ಇಲ್ಲವಾದರೆ ಯಜ್ಞೋಪವೀತಗಳನ್ನಾದರೂ ಕೊಡಲೇಬೇಕು. ಅಥವಾ ತತ್‌ಪ್ರತಿನಿಧಿಯಾಗಿ ಯಥಾ ಶಕ್ತಿ ದ್ರವ್ಯವನ್ನಾದರೂ ಕೊಡಬೇಕು. ಯಜ್ಞೋಪವೀತ ದಾನದಿಂದ ವೇದದಾನದ ಫಲ ಪ್ರಾಪ್ತಿಯಾಗುತ್ತದೆ.

೨೦. 'ದೈವಪೂರ್ವಾಣಿ ಸರ್ವಾಣಿ ... ' —ಶ್ರಾದ್ಧಕಲ್ಪಲತಾ

ಶ್ರಾದ್ಧದಲ್ಲಿ ಎಲೆ ಬಡಿಸುವ ಮೊದಲು ಸವ್ಯದಿಂದ ದೇವಸ್ಥಾನ ಪಾತ್ರೆಗೆ 'ಮೂರ್ಧಾನಂ' ಎಂಬ ಮಂತ್ರದಿಂದ ಅಭಿಘಾರಮಾಡಿ ಅನ್ನ ಮೊದಲಾದ ಸರ್ವಭಕ್ಷ್ಯ ಪದಾರ್ಥಗಳನ್ನು ಬಡಿಸಿ, ಆಮೇಲೆ ಪಿತೃಪಾತ್ರೆಗೆ ಬಡಿಸಬೇಕು. ಈ ಬಡಿಸುವ ಮೊದಲು ಪಿತೃಪಾತ್ರೆಗೆ ಅಬಿಘಾರ ಮಾಡಿರಬೇಕು. 'ಆಮಾಸುಪಕ್ವ' ಇತ್ಯಾದಿ ಮಂತ್ರಗಳನ್ನು ಸ್ವಯಂ ಪಠಣ ಮಾಡಬೇಕು.

೨೧ ಮತ್ತು ೨೨. 'ಅಚ್ಯುತಾನಂತ ಗೋವಿಂದಂ ... '

—ಗರುಡ ಪುರಾಣ

ಶ್ರಾದ್ಧದಲ್ಲಿ ಅಚ್ಯುತ, ಅನಂತ, ಗೋವಿಂದ ಎಂಬ ನಾಮತ್ರಯವನ್ನು ಸ್ಮರಿಸುವದರಿಂದ ಕರ್ಮಪೂರ್ತಿಯಾಗುವದು. ವಿಷ್ಣು ಸ್ಮರಣವೇ ಸರ್ವ ಕಾರ್ಯವನ್ನು ಪೂರ್ಣಗೊಳಿಸುವದು ಆದ್ದರಿಂದ ನಾಮತ್ರಯವನ್ನು ಜಪಿಸಿಯೇ ತೀರಬೇಕು.

ನಾಮತ್ರಯ ಸ್ಮರಣ ಪೂರ್ವಕ ಗೋಮಯ ದರ್ಭ, ಯವ, ತಿಲಗಳಿಂದ ಪಂಕ್ತಿವಾರಣ ಮಾಡುವದರಿಂದ ಕುಜನರ ದೃಷ್ಟಿದೋಷ ನಿವಾರಣೆಯಾಗುವದು. ಹಾಗು ಶ್ರೀಹರಿಯು ದೇವ ಪಿತೃಸ್ಥಾನದ ಬ್ರಾಹ್ಮಣರನ್ನು ರಕ್ಷಿಸುವನು.

೨೩. 'ದಂತಧಾವನ ತಾಂಬೂಲಂ ... .' —ದಾಲ್ಭ್ಯಸ್ಮೃತಿ

ಶ್ರಾದ್ಧ ಮಾಡುವ ಯಜಮಾನನು ಆಚರಿಸಬೇಕಾದ ನಿಯಮಗಳು—ಶ್ರಾದ್ಧದಿನದಲ್ಲಿ ದಂತ ಧಾವನ ಮಾಡಕೂಡದು ತಾಂಬೂಲ ಸೇವನ, ತೈಲಾಭ್ಯಂಗ, ದ್ವಿಭೋಜನ, ಸ್ತ್ರೀಭೋಗ, ಔಷಧಿ ಸೇವನ, ಹಾಗು ಪರಾನ್ನ ಭಕ್ಷಣ ಈ ಏಳನ್ನು ಬಿಡಲೇಬೇಕು.

೨೪ 'ಪುನರ್ಭೋಜನಮಧ್ವಾನಂ . ....' — ಶ್ರಾದ್ಧಮಂಜರಿ

ಶ್ರಾದ್ಧಭೋಜನ ಮಾಡುವ ಬ್ರಾಹ್ಮಣನು ಆಚರಿಸಬೇಕಾದ ನಿಯಮಗಳು—ಪುನರ್ಭೋಜನ ಅಭ್ಯಂಗ, ಭಾರವಹನ, ಅಧ್ಯಯನ, ಸ್ತ್ರೀಸಂಗ, ಸಂಧ್ಯಾ, ದಾನ ಸ್ವೀಕಾರ, ಹೋಮ ಈ ಎಂಟು ವರ್ಜ್ಯಗಳು.

೨೫. 'ಏಕೋತ್ತರ ಶತಂದರ್ಭೈ..... ..'

ಇಪ್ಪತ್ತೊಂದು ಅಂಗುಲ ಉದ್ದವುಳ್ಳದ್ದಾಗಿಯೂ, ತುದಿಯಿಂದ ಕೂಡಿದ್ದು ಹಸಿರಾಗಿಯೂ ಇರುವ ೧೦೧ ದರ್ಭಗಳನ್ನು ಒಂದೇ ಕಾಲಕ್ಕೆ ಕೊಯ್ದು ತಂದಲ್ಲಿ ಅದಕ್ಕೆ 'ಸಕೃದಾಚ್ಛಿನ್ನ ದರ್ಭ'ವೆಂದೆನ್ನುತ್ತಾರೆ.

೨೬. 'ಏಕೋದ್ದಿಷ್ಟೇಸು ಪಿಂಡೇತು...... ' —ನಿರ್ಣಯಸಿಂಧು

ಶ್ರಾದ್ಧಗಳಲ್ಲಿ ಮಾಡಬೇಕಾದ ಪಿಂಡ ಪರಿಮಾಣಗಳು ಹನ್ನೆರಡನೇ ದಿನ ಮಾಡುವ ಸಪಿಂಡೀಕರಣ ಶ್ರಾದ್ಧದಲ್ಲಿ ಬೆಳವಲ ಹಣ್ಣಿನ ಪ್ರಮಾಣದ ಪಿಂಡವನ್ನು ಮಾಡಬೇಕು. ಸಾಂವತ್ಸರಿಕ ಶ್ರಾದ್ಧದಲ್ಲಿ ತೆಂಗಿನಕಾಯಿ ಪ್ರಮಾಣದಲ್ಲಿಯೂ, ತೀರ್ಥ ಶ್ರಾದ್ಧದಲ್ಲಿ ಕೋಳೀತತ್ತೀ ಪ್ರಮಾಣದಲ್ಲಿಯೂ, ಮಹಾಲಯ ಹಾಗು ಗಯಾ ಶ್ರಾದ್ಧಗಳಲ್ಲಿ ನೆಲ್ಲೀಕಾಯಿಯ ಪ್ರಮಾಣದಲ್ಲಿಯೂ ಪಿಂಡಗಳನ್ನು ಮಾಡಬೇಕು

೨೭ 'ತಿಲಮನ್ನಂಚ ಪಾನೀಯಂ... ' —ಸ್ಮೃತಿಮುಕ್ತಾವಲಿ

ಶ್ರಾದ್ಧದಲ್ಲಿ ಪಿಂಡಕ್ಕೆ ಮಿಶ್ರಣವಾಗುವ ಪದಾರ್ಥಗಳು ವಿಷ್ಣು ನಿವೇದಿತವಾದ ಅನ್ನ, ಎಳ್ಳು, ದರ್ಭೆ, ಮೊಸರು, ತುಪ್ಪ, ಬೆಲ್ಲ, ಜೇನುತುಪ್ಪ ಈ ಎಂಟು ಪದಾರ್ಥಗಳೂ ಹಾಗು ವಿಷ್ಣುಪಾದೋದಕ, ತುಲಸಿ ಸಹಿತವಾದ ಪಿಂಡಗಳನ್ನು ಮಾಡಬೇಕು

೨೮. 'ತಿಲೈರ್ಯವೈಃ ಶಿರಃಪ್ರೋಕ್ತಂ. '—ಸ್ಮೃತಿಮುಕ್ತಾವಲಿ

ಶ್ರಾದ್ಧದಲ್ಲಿ ತಿಲ, ಯವಗಳಿಂದ ಶಿರಸ್ಸು, ಮೊಸರಿನಿಂದ ನಾಶಿಕ, ತುಪ್ಪದಿಂದ ಕಿವಿ, ಬೆಲ್ಲದಿಂದ ಭುಜಗಳು, ಹಾಲಿನಿಂದ ಹೃದಯ, ಜೇನುತುಪ್ಪದಿಂದ ರೋಮಗಳು, ಜಲದಿಂದ ಕೈಕಾಲುಗಳು ಹೀಗೆ ಪಿಂಡಕ್ಕೆ ಕೂಡಿಸುವ ಎಂಟು ದ್ರವ್ಯಗಳಿಂದ ಅವಯವಗಳು ಪಿಂಡದಲ್ಲಿ ಹುಟ್ಟುತ್ತವೆ.

೨೯. 'ಯಃ ಶ್ರಾದ್ಧಕಾಲೇ ಹರಿಭುಕ್ತಶೇಷಂ ...'

—ಸ್ಮೃತಿಮುಕ್ತಾವಲಿ

ಶ್ರಾದ್ಧಕಾಲದಲ್ಲಿ ಹರಿಯರ್ಪಿತವಾದ ಅನ್ನಾದಿ ಪದಾರ್ಥಗಳಿಂದ ತುಲಸಿವಿಮಿಶ್ರಿತ ಸಿದ್ಧ ಪಿಂಡಗಳನ್ನು ಪಿತೃಗಳಿಗೆ ಭಕ್ತಿಪೂರ್ವಕವಾಗಿ ಯಾರು ಕೊಡುವರೋ ಅವರ ಪಿತೃಗಳು ಕೋಟಿಕಲ್ಪ ಪರ್ಯಂತವಾಗಿ ತೃಪ್ತಿಪಡುತ್ತಾರೆ

೩೦ ಹಾಗು ೩೧ 'ಅಗಸ್ತ್ಯಂ ಭೃಂಗರಾಜಂಚ......' 'ಪಿತೃ ಪಿಂಡಾರ್ಚನಂ ಶ್ರಾದ್ಧೈಃ......' - ಮಾರ್ಕಂಡೇಯಸ್ಮೃತಿ, –ಸ್ಮೃತಿ ಮುಕ್ತಾವಲಿ.

ಚೊಗಚಿಹೂ, ಕಾಡಿಗ್ಗರಗು, ತುಲಸಿ, ಕಮಲಪುಷ್ಪ, ಸಂಪಿಗೆ ಹೂ, ಎಳ್ಳುಹೂ ಈ ಆರು ಪುಷ್ಪಗಳು ಪಿತೃಗಳಿಗೆ ಅತೀ ಪ್ರೀತ್ಯಾಸ್ಪದವಾದವು. ವಿಷ್ಣ್ವರ್ಪಿತ ತುಲಸಿ ಹೂಗಳನ್ನು ಪಿಂಡಪೂಜೆಯಲ್ಲಿ ಉಪಯೋಗಿಸಿದರೆ ಆಚಂದ್ರಾರ್ಕವೂ ಪಿತೃಗಳು ತುಷ್ಟಿಗೊಳ್ಳುವರು.

೩೨. 'ಪಿತುರ್ಮಾತುಶ್ಚ ಭಾರ್ಯಾಯಾಃ.. ..'

- ಮಾರ್ಕಂಡೇಯಸ್ಮೃತಿ.

ತಂದೆ, ತಾಯಿ, ಹೆಂಡತಿ, ಅಕ್ಕತಂಗಿ, ಮಗಳು, ಸೋದರತ್ತೆ, ಅಬ ಚಿಯರು ಇವರೇ ಸಪ್ತಗೋತ್ರಜರು.

೩೩. 'ಶ್ರಾದ್ಧಾರಂಭೇ ತಥಾಚಾಂತೇ . ' –ಶ್ರಾದ್ಧಕಲ್ಪಲತಾ

ಶ್ರಾದ್ಧಾರಂಭದಲ್ಲಿ, ಹಾಗು ಸಮಾಪ್ತಿಯಲ್ಲಿ, ಪಾದಪ್ರಕ್ಷಾಲನಾ ನಂತರ ವಿಕಿರಾನಂತರ, ಉಚ್ಛಿಷ್ಟ ಪಿಂಡದಾನಾನಂತರ, ಪಿಂಡದಾನಾನಂತರ ಈ ಆರು ಸಂದರ್ಭಗಳಲ್ಲಿ ಕಾರ್ಯಾನಂತರ ಆಚಮನ ಮಾಡಲೇಬೇಕು. ಶ್ರಾದ್ಧಾರಂಭ, ಸಮಾಪ್ತಿ ಕಾಲಗಳಲ್ಲಿ ಎರಡೆರಡಾವರ್ತಿ ಉಳಿದ ಕಾಲದಲ್ಲಿ ಒಂದಾವರ್ತಿ ಆಚಮನ ಮಾಡಬೇಕು

೩೪ ಮತ್ತು ೩೫ 'ಯಜಮಾನಸ್ಯ ದಾಸಾದೀನ್... '
'ಅನೂಪನೀತಾ ವಿಜ್ಞೇಯಾ ' –ಶ್ರಾದ್ಧಮಂಜರೀ

ಯಜಮಾನನ ಕುಲದಲ್ಲಿ ಹುಟ್ಟಿ ವೃತ್ತಿ ಹೊಂದಿದ ದಾಸ–ದಾಸಿಯ ರಿಗೆ ಶ್ರಾದ್ಧದಲ್ಲಿ ಉಚ್ಛಿಷ್ಟಾನ್ನವನ್ನು ಕೊಡಬೇಕಾಗುತ್ತದೆ ಅದನ್ನು ದೇವ, ಪಿತೃ ಬ್ರಾಹ್ಮಣರು ಯಜಮಾನನ ಪ್ರಾರ್ಥನೆಯಂತೆ ತಮ್ಮ ತಮ್ಮ ಎಲೆ ಯಲ್ಲಿ ಉಂಡು ಉಳಿದ ಅನ್ನವನ್ನು ಕ್ರಮದಿಂದ ಬಲ, ಎಡಭಾಗದಲ್ಲಿ ಎಲೆ ಯಿಂದ ನೆಲಕ್ಕೆ ಸರಿಸಬೇಕು ಇದರಿಂದ ದಾಸ ದಾಸಿಯರೂ ತೃಪ್ತರಾಗ ತ್ತಾರೆ ಅನುಪನೀತರೂ, ಅವಿವಾಹಿತ ಕನ್ಯೆಯರೂ ದಾಸ–ದಾಸಿಯ ಲ್ಲಿಯೇ ಸೇರುತ್ತಾರೆ.

೩೬. 'ಬ್ರಾಹ್ಮಣಾನಾಂ ಅಸಂಪತ್ತೌ .. .. .' –ಶ್ರಾದ್ಧಮಂಜರಿ

ಶ್ರಾದ್ಧದಲ್ಲಿ ಯೋಗ್ಯ ಬ್ರಾಹ್ಮಣರು ಸಿಗದೇ ಇದ್ದಲ್ಲಿ ತಾನು ಮಂತ್ರಜ್ಞ ನಾಗಿದ್ದು, ದರ್ಭಮಯವಾದ ಬ್ರಾಹ್ಮಣರನ್ನು ಇಟ್ಟುಕೊಂಡು ಚಟಶ್ರಾದ್ಧ ವನ್ನು ಮಾಡಬೇಕು. ಅನಂತರದಲ್ಲಿ ಬ್ರಾಹ್ಮಣರಿಗೆ ಅನ್ನದಾನ ಮಾಡ ಬೇಕು ಸರ್ವಾಭಾವದಲ್ಲಿ ಗೋವಿಗೆ ಗ್ರಾಸವನ್ನು ಕೊಡಬೇಕು

೩೭ 'ದಶಕೃತ್ವಃ ಪಿಬೇದಾಪಃ ....' –ಶ್ರಾದ್ಧಮಂಜರಿ

ಶ್ರಾದ್ಧಭೋಜನ ಮಾಡಿದವನು ಹತ್ತುಸಲ ಗಾಯತ್ರಿಮಂತ್ರದಿಂದ ಅಭಿಮಂತ್ರಿಸಿದ ಜಲವನ್ನು ಪಾನಮಾಡಿದಲ್ಲಿ ಸಾಯಂಕಾಲ ಸಂಧ್ಯಾ, ಜಪ, ಹೋಮ ಮೊದಲಾದವುಗಳಿಗೆ ಅಧಿಕಾರಿಯಾಗುತ್ತಾನೆ.

೩೮ 'ನ ಯಾಚಯೇತ್ ದರ್ಭಪತ್ರಂ .. ' –ಶ್ರಾದ್ಧಕಲ್ಪಲತಾ

ಶ್ರಾದ್ಧಾದಿಗಳಿಗಾಗಿ ಬೇಕಾಗುವ ದರ್ಭೆ, ಬೆಲ್ಲ ಶಾಕ, ಜಲ ಇತ್ಯಾದಿ ಗಳನ್ನು ಹೆರವರಿಂದ ಬೇಡಿ ತರಬಾರದು ಹಾಗೆ ಬೇಡಿ ತಂದ ಪದಾರ್ಥ ಗಳಿಂದ ಮಾಡಿದ ಶ್ರಾದ್ಧವು ನಿಷ್ಫಲವಾಗುವದು

೩೯. 'ತೀರ್ಥಾಭಾವೇ ತಿಲಾಭಾವೇ .. ...' - ಪದ್ಮಪುರಾಣ

ಶ್ರಾದ್ಧಾದಿ ತರ್ಪಣಗಳಲ್ಲಿ ಎಳ್ಳು, ದರ್ಭೆ, ತುಲಸಿ ಇವು ಅತ್ಯವಶ್ಯ ವಾದವು. ಇವುಗಳ ಅಭಾವದಲ್ಲಿ ವಿಷ್ಣ್ವರ್ಪಿತ ತುಲಸೀದಲವಾದರೂ ಅತ್ಯವಶ್ಯವಾಗಿದೆ. ಅದರಿಂದ ಸರ್ವಫಲ ಪ್ರಾಪ್ತವಾಗುವದು.

೪೦. 'ದರ್ಶೇ ತಿಲೋದಕಂ ಪೂರ್ವಂ . .' –ನಿರ್ಣಯಸಿಂಧು

ದರ್ಶಶ್ರಾದ್ಧಕ್ಕೆ ಮೊದಲು ತಿಲತರ್ಪಣವನ್ನು ಮಾಡಬೇಕು. ಅನಂತರ ಶ್ರಾದ್ಧಮಾಡಬೇಕು ಪ್ರತಿಸಾಂವತ್ಸರಿಕ ಶ್ರಾದ್ಧದಲ್ಲಿ ಮರುದಿನದಲ್ಲಿ ತರ್ಪಣ ಮಹಾಲಯದಲ್ಲಿ ಶ್ರಾದ್ಧಾನಂತರ ತರ್ಪಣ ಮಾಡಬೇಕು ಸಕೃನ್ಮಹಾಲಯ ಮಾಡುವದಾದಲ್ಲಿ ಮರುದಿನ ತರ್ಪಣ ಮಾಡಬೇಕು.

೪೧. 'ವೃದ್ಧಿಶ್ರಾದ್ಧೇ ಸಪಿಂಡೀಚ . ' –ಶ್ರಾದ್ಧಮಂಜರಿ

ತಿಲತರ್ಪಣವಿಲ್ಲದಿರುವ ಶ್ರಾದ್ಧಗಳು ನಾಂದಿಶ್ರಾದ್ಧ, ಸಪಿಂಡೀಕರಣ ಶ್ರಾದ್ಧ, ಪ್ರೇತಶ್ರಾದ್ಧ, ಮಾಸಿಕ, ಅನುಮಾಸಿಕ, ವಿಮೋಕಾ ಅಂದರೆ ಅಬ್ದ ಪೂರ್ತಿಶ್ರಾದ್ಧ ಇವುಗಳಿಗೆ ತಿಲತರ್ಪಣವಿಲ್ಲ

೪೨. 'ಅನಗ್ನಿಕಶ್ಚ ಷಂಢಶ್ಚ. .... ' —ಸ್ಮೃತಿಮುಕ್ತಾವಲಿ

ಔಪಾಸನಾಗ್ನಿ ಇಲ್ಲದವನು, ಷಂಢನು, ವಿಧವಾ, ವಿಧುರ, ಬ್ರಹ್ಮಚಾರಿ ಇವರೆಲ್ಲರೂ ಶ್ರಾದ್ಧದಲ್ಲಿ ಪಾಣಿಹೋಮವನ್ನು ವಿಶ್ವೇ ದೇವತೆಗಳ ಕೈಯಲ್ಲಿ ಮಾಡಬೇಕು.

೪೩. 'ಅಗ್ನೌಕರಣೇನ ದೇವಸ್ಥಾಃ.... .' —ಸ್ಮೃತಿಮುಕ್ತಾವಲಿ

ಪಾಣಿಹೋಮದಿಂದ ದೇವಲೋಕ ಹೊಂದಿದ ಪಿತೃಗಳು ತೃಪ್ತಿ ಹೊಂದುವರು ಬ್ರಾಹ್ಮಣ ಭೋಜನದಿಂದ ಸ್ವರ್ಗಸ್ಥರಾದ ಪಿತೃಗಳ ತೃಪ್ತಿ, ಪಿಂಡಪ್ರದಾನದಿಂದ ಯಮ ಲೋಕದಲ್ಲಿರುವ ಪಿತೃಗಳ ತೃಪ್ತಿ, ವಿಕಿರಾನ್ನ ದಿಂದ ನರಕದಲ್ಲಿರುವ ಪಿತೃಗಳ ತೃಪ್ತಿ, ತಿಲೋದಕದಿಂದ ತಿರ್ಯಕ ಯೋನಿ ಗಳಲ್ಲಿ ಜನಿಸಿರುವ ಪಿತೃಗಳ ತೃಪ್ತಿ, ದಕ್ಷಿಣೆ ದಾನದಿಂದ ಮನುಷ್ಯಯೋನಿ ಯಲ್ಲಿ ಜನಿಸಿದ ಪಿತೃಗಳ ತೃಪ್ತಿ, ಭೂರಿಭೋಜನದಿಂದ ಅಸುರಯೋನಿ ಯಲ್ಲಿ ಜನಿಸಿದ ಪಿತೃಗಳತೃಪ್ತಿ ಆಗುವದು.ಇವೇ ಏಳು ಶ್ರಾದ್ಧ ಪ್ರಕಾರಗಳು.

೪೪. 'ಉಚ್ಛಿಷ್ಟಂ ಶಿವನಿರ್ಮಾಲ್ಯಂ.. .. .' —ನಿರ್ಣಯಸಿಂಧು

ಶ್ರಾದ್ಧದಲ್ಲಿ ಏಳು ಪದಾರ್ಥಗಳು ಅತ್ಯಂತ ಪವಿತ್ರವಾಗಿವೆ. ೧) ಆಕಳ ಕರು ಕುಡಿದು ಬಿಟ್ಟಮೇಲೆ ಹಿಂಡಿದ ಹಾಲು, ೨) ಗಂಗಾಜಲ, ೩) ಜೇನು ತುಪ್ಪ, ೪) ರೇಶ್ಮೆವಸ್ತ್ರ, ೫) ಮಗಳ ಮಗ, ೬) ಶ್ರಾದ್ಧಕಾಲ, ೭) ತಿಲ. ಶ್ರಾದ್ಧದಲ್ಲಿ ಅತ್ಯವಶ್ಯಗಳು.

೪೫. 'ವಿಷ್ಣುಸ್ಮರಣ ಸಂಶುದ್ಧೋ........'

—ಬೃಹತ್‌ಪರಾಶರಸ್ಮೃತಿ

ಯಾವದೇ ಕಾರ್ಯಗಳಲ್ಲಿಯೂ ಅದರಲ್ಲಿಯೂ ಶ್ರಾದ್ಧಕಾರ್ಯದಲ್ಲಿ ಮೊದಲು, ಮಧ್ಯ, ಕೊನೆಗಳಲ್ಲಿ ಮಾಡುವ ವಿಷ್ಣು ಸ್ಮರಣೆಯು ಕರ್ಮ ಪೂರ್ತಿಯನ್ನು ಮಾಡಿ ಶುದ್ಧಿ ಮೊದಲಾದ ಯೋಗ್ಯತೆಯನ್ನು ತಂದು ಕೊಡುವದು.

೪೬. 'ಅನ್ನಂ ಚ ಪಾಯಸಂ ಭಕ್ಷ್ಯಂ. ... '

—ಸ್ಮೃತಿಮುಕ್ತಾವಲಿ

ಅನ್ನ, ಪಾಯಸ, ಭಕ್ಷ್ಯ, ವ್ಯಂಜನ ಪದಾರ್ಥಗಳನ್ನು ದೇವಸ್ಥ ಪಾತ್ರೆಗೆ ಬಡಿಸಿ ಆ ಮೇಲೆ ಪಿತೃಪಾತ್ರೆಗೆ ಇದೇ ಕ್ರಮದಲ್ಲಿ ಬಡಿಸಿ ಕೊನೆಗೆ ತವಿಯನ್ನು ಬಡಿಸಬೇಕು (ತುಪ್ಪದ ದೊನ್ನೆಯನ್ನು ಅನ್ನಪಾಯಸಾದಿಗಳಲ್ಲಿ ಇಡದೆ ಬೇರೆಡೆ ಇಡಬೇಕು. ಅನ್ನದ ಮೇಲೆ ತವಿ ಬಡಿಸಬಾರದು.)

೪೭. ' ಆಸನಾವಾಹನೇ ಪಾದ್ಯೇ..... .. ' —ಸಂಗ್ರಹವಚನ

ಶ್ರಾದ್ಧದಲ್ಲಿ ಆಸನ, ಆವಾಹನ, ಪಾದಪ್ರಕ್ಷಾಲನ, ಅನ್ನದಾನ, ಅಕ್ಷಯ್ಯವಾಚನ, ಪಿಂಡದಾನ ಈ ಆರು ಕಾಲಗಳಲ್ಲಿ ಪಿತೃಗಳಹೆಸರು ಗೋತ್ರ ಗಳನ್ನು ಉಚ್ಚರಿಸಲೇಬೇಕು.

೪೮ ' ಮಹಾಲಯೇ ಗಯಾಶ್ರಾದ್ಧೇ .. ' —ನಿರ್ಣಯಸಿಂಧು

ಮಹಾಲಯ, ಗಯಾಶ್ರಾದ್ಧ, ತಂದೆ-ತಾಯಿಗಳ ಸಾಂವತ್ಸರಿಕ ಶ್ರಾದ್ಧ ಇವು (ಮಕ್ಕಳ) ಮದುವೆಯಾದ ಸ್ವಲ್ಪ ದಿವಸಗಳಲ್ಲಿ ಬರುತ್ತಿದ್ದಾ ಗಲೂ ಪಿಂಡಪ್ರದಾನ ಮಾಡಲೇಬೇಕು.

೪೯. 'ಗೋಧೂಮ ಪಾಯಸಂ ಚೈವ ...)

—ಸ್ಮೃತಿಮುಕ್ತಾವಲಿ

ಶ್ರಾದ್ಧಕ್ಕೆ ಗೋದಿ ರವೆಯ ಪಾಯಸ, ಹಾಗಲಕಾಯಿ, ಗೋಕ್ಷೀರ, ಧದಿ, ಘೃತ, ಹೆಸರು ಬೇಳೆಯ ಪದಾರ್ಥ, ಉದ್ದಿನವಡೆ, ಕರೇ ಎಳ್ಳು ಇವು ಪವಿತ್ರವಾದವುಗಳು.

೫೦. ' ಸಂಕಲ್ಪಾಸ್ಸನಯೋಃ ಷಷ್ಠೀ . ... ' —ನಿರ್ಣಯಸಿಂಧು

ಶ್ರಾದ್ಧಸಂಕಲ್ಪದಲ್ಲಿ ಆಸನ, ಆಮಂತ್ರಣ, ಅಕ್ಷಯ್ಯವಾಚನ, ಇತ್ಯಾದಿ ಗಳಲ್ಲಿ ಷಷ್ಠೀ ವಿಭಕ್ತಿಯಲ್ಲಿ, ದೇವಪಿತೃಗಳ ಆವಾಹನಕಾಲದಲ್ಲಿ ದ್ವಿತಿಯಾ ವಿಭಕ್ತಿಯಲ್ಲಿ, ಅನ್ನದಾನ ಕಾಲದಲ್ಲಿ ಚತುರ್ಥೀ ವಿಭಕ್ತಿಯಲ್ಲಿ, ಪಿಂಡದಾನ ದಲ್ಲಿ ಸಂಭೋಧನ, ಪಿಂಡಾರ್ಚನ ಕಾಲದಲ್ಲಿ ಚತುರ್ಥ್ಯಂತವಾಗಿಯೂ ಉಚ್ಚರಿಸಬೇಕು.

೫೧. 'ತ್ರೀಣಿಚಾತ್ರ ಪ್ರಶಂಸಂತಿ . ' —ನಿರ್ಣಯಸಿಂಧು

ಶ್ರಾದ್ಧಕರ್ತನು ಶ್ರಾದ್ಧದಿನದ ಮಟ್ಟೆಗಾದರೂ ಪವಿತ್ರನಾಗಿಯೂ,

ಕೋಪರಹಿತನಾಗಿಯೂ, ತಾಳ್ಮೆ-ಸಮಾಧಾನವುಳ್ಳವನಾಗಿಯೂ ಇರುವದು ಪ್ರಶಂಸನೀಯವಾಗಿದೆ.

೫೨. 'ದೇಶ ಕಾಲೇ ಚ ಪಾತ್ರೇ ಚ. ....' —ನಿರ್ಣಯಸಿಂಧು

ಶ್ರಾದ್ಧಕ್ಕೆ ಕಾಶಿ, ಪ್ರಯಾಗ, ಗಯಾ, ಪುಷ್ಕರ, ಪ್ರಭಾಸ ಇತ್ಯಾದಿ ಪುಣ್ಯಕ್ಷೇತ್ರಗಳಲ್ಲಿಯೂ ಮತ್ತು ಈ ಕ್ಷೇತ್ರಗಳನ್ನು ಅನುಸಂಧಾನ ಮಾಡಿಕೊಂಡು ತಾವಿದ್ದ ಸ್ಥಳದಲ್ಲಿಯೂ ಸಂಕ್ರಮಣ ಮೊದಲಾದ ಪರ್ವಕಾಲಗಳಲ್ಲಿ ಸತ್ಪಾತ್ರರಾದ ಬ್ರಾಹ್ಮಣರಿಗೆ ಭಕ್ತಿಪೂರ್ವಕವಾಗಿ ವಿಧಿಪೂರ್ವಕವಾಗಿ ಕೊಡುವ ಅನ್ನದಾನವು ಪಿತೃಗಳಿಗೆ ಶ್ರಾದ್ಧವೆನಿಸಿ ತೃಪ್ತಿಕೊಡುತ್ತದೆ

೫೩. 'ತಸ್ಯ ದೇಶಾಃ ಕುರುಕ್ಷೇತ್ರಂ ' —ನಿರ್ಣಯಸಿಂಧು

ಪುಣ್ಯಕ್ಷೇತ್ರಗಳಾದ ಕುರುಕ್ಷೇತ್ರ, ಗಯಾ, ಗಂಗಾತೀರ, ಕಾಶಿ, ಸರಸ್ವತೀ ತೀರ, ಮಾತೃ ಗಯಾ, ಪ್ರಭಾಸ, ಪುಷ್ಕರ ಈ ಮೊದಲಾದ ಕ್ಷೇತ್ರಗಳಲ್ಲಿ ಶ್ರಾದ್ಧ ಮಾಡಿದರೆ ಮಹಾಫಲಪ್ರಾಪ್ತಿಯಾಗುವದು.

೫೪ 'ಮುದ್ಗಾನ್ನಂ ಮಾಸತೃಪ್ಯಂತು .' —ಸ್ಮೃತಿಮುಕ್ತಾವಲಿ

ಶ್ರಾದ್ಧದಲ್ಲಿ ಹೆಸರುಬೇಳೆಯಿಂದ ಸಿದ್ಧವಾದ ಪದಾರ್ಥಗಳಿಂದ ಪಿತೃಗಳು ಒಂದು ತಿಂಗಳವರೆಗೆ ತೃಪ್ತರಾಗುವರು. ಉದ್ದಿನವಡೆಯಿಂದ ಮೂರು ತಿಂಗಳ, ಪರಮಾನ್ನದಿಂದ ಆರು ತಿಂಗಳ, ರವೆಯ ಉಂಡಿಯಿಂದ ವರ್ಷದವರೆಗೆ ತೃಪ್ತರಾಗುವರು.

೫೫ 'ಶ್ರಾದ್ಧಾತ್ ಪರತರಂ ನಾನ್ಯತ್.. ' —ಸ್ಮೃತಿಮುಕ್ತಾವಲಿ

ಪಿತೃಗಳಿಗೆ ಶ್ರಾದ್ಧಕ್ಕಿಂತಲೂ ಬೇರೆ ಯಾವದೂ ಶ್ರೇಯಸ್ಕರವಾದುದಿಲ್ಲ ಕಾರಣ, ಎಷ್ಟೇ ಅಡೆತಡೆಗಳು ಬಂದರೂ ಸರ್ವಪ್ರಯತ್ನದಿಂದ ಭಕ್ತಿಪೂರ್ವಕವಾಗಿ ಶ್ರಾದ್ಧವನ್ನು ಮಾಡಲೇಬೇಕು.

೫೬ 'ತುಲಸೀ ಕಾನನಚ್ಛಾಯಾ .. ' -ವ್ಯಾಸವಚನ

ತುಲಸೀ ವನದ ನೆಳಲಲ್ಲಿ ಶ್ರಾದ್ಧ ಮಾಡಿದರೆ ಪಿತೃಗಳಿಗೆ ಅತ್ಯಂತ ತೃಪ್ತಿಯು ಆಗುತ್ತದೆ.

೫೭ 'ಗಾಯತ್ರೀ ಸಾರಮಾತ್ರೋಽಪಿ ' ವ್ಯಾಸವಚನ

ನಿತ್ಯದಲ್ಲಿ ಗಾಯತ್ರೀ ಜಪಾನುಷ್ಠಾನವನ್ನು ಮಾಡುವ ಶ್ರೇಷ್ಠ ಬ್ರಾಹ್ಮಣರೇ ಶ್ರಾದ್ಧಕ್ಕೆ ಅರ್ಹರಾದ ಬ್ರಾಹ್ಮಣರು

೫೮. 'ಗಾಯತ್ರೀಂ ಚೈವ ವೇದಾಂಶ್ಚ' . ' –ಶ್ರಾದ್ಧಕಲ್ಪಲತಾ

ಗಾಯತ್ರೀ ಮಂತ್ರವೊಂದೇ ನಾಲ್ಕು ವೇದಗಳಿಗೆ ಸಮತೂಕವಾದದ್ದು. ಕಾರಣ ಶ್ರಾದ್ಧದಲ್ಲಿ ಗಾಯತ್ರೀ ಜಪಕ್ಕೆ ವಿಶೇಷ ಪ್ರಾಶಸ್ತ್ಯವಿದೆ.

೫೯. 'ಪಯೋದಧಿ ಘೃತಂ ಚೈವ .. ' –ಶ್ರಾದ್ಧಕಲ್ಪಲತಾ

ಶ್ರಾದ್ಧಕ್ಕೆ ಆಕಳ ಹಾಲು ಮೊಸರು ತುಪ್ಪ ಮೊದಲಾದ ಪದಾರ್ಥಗಳು ಅತಿ ಪವಿತ್ರವಾದವು ಪಿತೃಗಳಿಗೆ ಬಹು ತೃಪ್ತಿಯನ್ನುಂಟುಮಾಡುತ್ತವೆ. ಎಮ್ಮೆಯ ತುಪ್ಪವು ಮಾತ್ರ ಗ್ರಾಹ್ಯವಿದ್ದು ಎಮ್ಮೆಯ ಹಾಲು ಶ್ರಾದ್ಧದಲ್ಲಿ ನಿಷಿದ್ಧವಾಗಿದೆ.

೬೦ 'ಯಥಾಗೋಷ್ಠೇ ಪೀಸ್ಯಷ್ಟೋ ವೈ '
ಸದಾಚಾರಸ್ಮೃತಿ ವ್ಯಾಖ್ಯಾನ

ಗೋದಲಿಯಿಂದ ಬಿಚ್ಚಿಬಿಟ್ಟ ಕರುವು ತನ್ನ ತಾಯಿಯನ್ನೇ ಸೇರುವಂತೆ ಮಂತ್ರವಿಧಿ ಪೂರ್ವಕವಾಗಿ ಮಾಡಿದ ಶ್ರಾದ್ಧದಲ್ಲಿ ಕೊಡುವ ಅನ್ನವು ಪಿತೃಗಳನ್ನೇ ಸೇರುತ್ತದೆ

೬೧ 'ಗೋತ್ರಸ್ಯತ್ವಪರಿಜ್ಞಾನೇ ' ಶ್ರಾದ್ಧಕಲ್ಪಲತಾ

ಶ್ರಾದ್ಧಮಾಡುವ ಯಜಮಾನನಿಗೆ ತನ್ನ ಗೋತ್ರವು ಯಾವುದೆಂದು ಗೊತ್ತಿರದಲ್ಲಿ ಕಾಶ್ಯಪಗೋತ್ರಜನೆಂದು ತಿಳಿದು ಶ್ರಾದ್ಧಕಾರ್ಯ ಮಾಡಬೇಕು ಯಾಕೆಂದರೆ ಸರ್ವಪ್ರಾಣಿಗಳು ಮಾನವರು ಕಶ್ಯಪಋಷಿಯಿಂದಲೇ ಉತ್ಪನ್ನರಾದವರೆಂದು ಶ್ರುತಿಯು ಸಾರುತ್ತದೆ.

೬೨ 'ವ್ರತಯಜ್ಞ ವಿವಾಹೇಷು ' ನಿರ್ಣಯಸಿಂಧು

ಉದ್ಯಾಪನೆ, ವ್ರತ, ವಿವಾಹ ಸಂಸ್ಕಾರಗಳಲ್ಲಿ ನಾಂದೀಸ್ಥಾಪನೆಯು ಆದಮೇಲೆ, ಅಗ್ನಿಷ್ಟೋಮಾದಿ ಯಾಗಗಳಲ್ಲಿ ಋತ್ವಿಜರಿಗೆ ವರಣ ಕೊಟ್ಟ

ಮೇಲೆ, ಹೋಮ ಆರಂಭವಾದಮೇಲೆ, ಆಶೌಚ ಸೂತಕಾದಿಗಳ ಸಂಬಂಧ ಹತ್ತುವದಿಲ್ಲ ಅದರಂತೆ ಶ್ರಾದ್ಧ ಕಾರ್ಯದಲ್ಲಿ ಬ್ರಾಹ್ಮಣರಿಗೆ ಕ್ಷಣ (ಆಮಂತ್ರಣ) ಕೊಟ್ಟು ಸಂಕಲ್ಪ ಮುಗಿದು ಪಾಕ ಪ್ರಾರಂಭವಾಗಿದ್ದಲ್ಲಿ ಆಶೌಚ ಸೂತಕಾದಿಗಳು ಹತ್ತುವದಿಲ್ಲ

೬೩. 'ಅಧ್ವಗಸ್ತು ಭವೇದಶ್ವಃ ' ಸ್ಮೃತಿಮುಕ್ತಾವಲಿ

ಶ್ರಾದ್ಧ ಭೋಜನ ಮಾಡಿದವನು ದಾರಿಯನ್ನು ನಡೆಯಬಾರದು ಹಾಗೆ ಮಾಡಿದಲ್ಲಿ ಜನ್ಮಾಂತರದಲ್ಲಿ ಅಶ್ವ (ಕುದುರೆ) ಜನ್ಮ ಹೊಂದುವನು. ಅದರಂತೆ ದ್ವಿಭೋಜನ ಮಾಡಿದನು ಕಾಗೆಯಾಗಿಯೂ, ಶ್ರಮ ಕೆಲಸ ಗೈದವನು ಶೂದ್ರನಾಗಿಯೂ, ರತಿಸುಖ ಪಡೆದವನು ಹಂದಿಯಾಗಿಯೂ, ಔಪಾಸನಾದಿ ಹೋಮಮಾಡಿದವನು ಕ್ಷಯರೋಗಿಯಾಗಿಯೂ ಅಧ್ಯಯನ ಮಾಡಿದವನು ಮರಣ ಹೊಂದಿಯೂ, ದಾನ ಸ್ವೀಕಾರ ಮಾಡಿದವನು ದರಿದ್ರನಾಗಿಯೂ ಜನ್ಮಾಂತರಗಳಲ್ಲಿ ದುಃಖ ಹೊಂದುವನು

೬೪ ಹಾಗು ೬೫. 'ಅದ್ಯ ಮೇ ಸಫಲಂ ಜನ್ಮ ' ಹಾಗು 'ಪತ್ರ ಶಾಕಾದಿ ದಾನೇನ.. ' —ಮನುಸ್ಮೃತಿ

'ಇಂದು ನಿಮ್ಮ ಪಾದಕಮಲಗಳಿಗೆ ನಮಸ್ಕರಿಸಿದ್ದರಿಂದ ನನ್ನ ಜನ್ಮ ಸಫಲವಾಯಿತು ನಿಮ್ಮ ಅನುಗ್ರಹದಿಂದ ನನ್ನ ವಂಶದಲ್ಲಿ ಹುಟ್ಟಿದ ಸರ್ವ ಪಿತೃಗಳೂ ಸ್ವರ್ಗಾದಿ ಉತ್ತಮ ಲೋಕಗಳನ್ನು ಹೊಂದಲು ಕಾರಣವಾಯಿತು ಪತ್ರಶಾಕಾದಿ ಉಪಚಾರ, ದಕ್ಷಿಣೆ ದಾನಗಳಲ್ಲಿ ಏನಾದರೂ ಹೆಚ್ಚು ಕಡಿಮೆಯಾಗಿದ್ದರೆ ಅದರಿಂದಾದ ಅಸಂತೋಷವನ್ನು ಪೂಜ್ಯರಾದ ನೀವು ಮರೆತು ಅನುಗ್ರಹ ಮಾಡಬೇಕು' ಎಂಬುದಾಗಿ ಪ್ರಾರ್ಥಿಸಬೇಕು

೬೬. 'ದಾತಾರೋ ನೋಭಿವರ್ಧಂತಾಂ..... . ' —ಮನುಸ್ಮೃತಿ

'ನಮ್ಮ ವಂಶದಲ್ಲಿ ದಾನಿಗಳು ಉದಯಿಸಲಿ ಅಧ್ಯಯನ ಅಧ್ಯಾಪನಗಳ ವೇದಪರಂಪರೆ ವಂಶದೊಂದಿಗೆ ಬೆಳೆದುಬರಲಿ ಅತಿಥಿಗಳ ಉಪಚಾರ ಬಹುವಾಗಿ ಲಭಿಸಲಿ ವೇದಾರ್ಥಗಳಲ್ಲಿ ವ ನಸ್ಸು ವಿಶೇಷವಾಗಿ ಪ್ರವರ್ತಿ

ಸಲಿ ಶ್ರದ್ಧೆ, ಆದರ, ಉಪಚಾರ, ಭಕ್ತಿ ವಿಶ್ವಾಸಗಳು ಹೆಚ್ಚಾಗಲಿ'ಎಂದು ಬ್ರಾಹ್ಮಣರಲ್ಲಿ ಪ್ರಾರ್ಥಿಸಬೇಕು.

೬೭. 'ಅನೇನ ಪಿತೃಯಜ್ಞೇನ ...' —ಆಶ್ವಲಾಯನ ಸ್ಮೃತಿ

'ಶ್ರುತಿಸ್ಮೃತಿ ವಿಹಿತವಾದ ಪಿತೃಯಜ್ಞ ರೂಪವಾದ ಈ ಶ್ರಾದ್ಧ ವಿಧಿಯಿಂದ ಜನಾರ್ದನ ರೂಪಿಯಾದ ಪರಮಾತ್ಮನು ಪ್ರೀತನಾಗಲಿ ನಾನು ಭಕ್ತಿಯಿಂದ ಇಲ್ಲಿ ಮಾಡಿದ ಕರ್ಮಗಳೆಲ್ಲವೂ ಶ್ರೀಕೃಷ್ಣನಿಗೆ ಸಮರ್ಪಿತವಾಗಲಿ' ಎಂದು ಸಮರ್ಪಿಸಬೇಕು.

೬೮ 'ಅನೇನ ವಿಧಿನಾ ಚೈವ . ' —ಆಶ್ವಲಾಯನ ಸ್ಮೃತಿ

ಶ್ರುತಿಸ್ಮೃತಿ ಸಮ್ಮತವಾದ ವಿಧಿಯಿಂದ ಶ್ರಾದ್ಧಮಾಡಿದ ಬ್ರಾಹ್ಮಣನು ಇಹದಲ್ಲಿ ಸಕಲ ಇಷ್ಟಾರ್ಥಗಳನ್ನು ಪಡೆಯುವನಲ್ಲದೆ ಪರದಲ್ಲಿಯೂ ಸಾಲೋಕ್ಯಾದಿ ಮೋಕ್ಷವನ್ನು ಹೊಂದುವನು

೬೯ 'ಪ್ರಮಾದಾತ್ ಕುರ್ವತಾಂ ಕರ್ಮ . '

—ಸ್ಮೃತಿ ಮುಕ್ತಾವಲಿ

ಪಿತೃಯಜ್ಞವಾದ ಶ್ರಾದ್ಧ ಮಾಡುವಲ್ಲಿ ಪ್ರಮಾದದಿಂದಾದ ಲೋಪದೋಷಗಳನ್ನು ಶ್ರೀಕೃಷ್ಣ ಸ್ಮರಣೆ ಮಾತ್ರವೇ ಕಳೆದು. ಸಂಪೂರ್ಣತೆಯನ್ನು ತಂದು ಕೊಡುವದು.

೭೦ 'ಯಃ ಶಾಸ್ತ್ರವಿಧಿಮುತ್ಸೃಜ್ಯ... ....' - ಭಗವದ್ಗೀತಾ

ಯಾವನು ಶಾಸ್ತ್ರವಿಧಿ ನಿಯಮಗಳನ್ನು ಬಿಟ್ಟು ಮನಬಂದಂತೆ ನಡೆಯುವನೋ ಅವನು ಯಾವ ಸಿದ್ಧಿಯನ್ನು ಹೊಂದಲಾರನು. ವಿಧಿ ನಿಷೇಧಗಳನ್ನು ತಿಳಿದು ಶಾಸ್ತ್ರದಂತೆ ಕಾರ್ಯಗೈದಲ್ಲಿ ಇಹಪರದಲ್ಲಿ ಸುಖ ಪಡೆಯುತ್ತಾನೆ

೭೧. 'ವಿಧಿಹೀನಂ ಅಸೃಷ್ಟಾನ್ನಂ .' —ಭಗವದ್ಗೀತಾ

ವಿಧಿಹೀನವಾಗಿಯೂ, ಮಂತ್ರ ಹೀನವಾಗಿಯೂ ದಕ್ಷಿಣಾರಹಿತವಾಗಿಯೂ ಭಕ್ತಿ ಇಲ್ಲದೆಯೂ, ತಂಗಳ ಉಪಯೋಗಿಸಿಯೂ ಮಾಡುವ ಪಿತೃಯಜ್ಞವು ತಾಮಸವೆಂದು ಪರಿಗಣಿಸಲ್ಪಡುವದು.

# ಯಜುಃ ಶಾಖಿಗಳಿಗೆ ವಿಶೇಷ ಕ್ರಮ

೧ 'ಐಶಾನ್ಯಾಂ ಜುಹುಯಾದಗ್ನೌ . _' –ಸ್ಮೃತಿಮುಕ್ತಾವಲಿ

ಅನ್ನವನ್ನು ದರ್ಭೆಗಳಿಂದ ನಾಲ್ಕು ಭಾಗ ಮಾಡಿ ಅದಕ್ಕೆ ಅಭಿಘಾರಣ ಮಾಡಿ, ಈಶಾನ್ಯ ಭಾಗದಲ್ಲಿರುವ ಅನ್ನವನ್ನು ಅಗ್ನೌಕರಣ ಹೋಮಕ್ಕಾಗಿಯೂ ವಾಯುವ್ಯದಲ್ಲಿರುವ ಅನ್ನವನ್ನು ಪಿತೃಪಾತ್ರಕ್ಕಾಗಿಯೂ ನೈರುತ್ಯ ದಲ್ಲಿರುವ ಅನ್ನವನ್ನು ಪಿಂಡದಾನಕ್ಕಾಗಿಯೂ, ಆಗ್ನೇಯದಲ್ಲಿರುವದನ್ನು ವಿಕಿರಕ್ಕಾಗಿಯೂ ಶ್ರಾದ್ಧದಲ್ಲಿ ಉಪಯೋಗಿಸಬೇಕು

೨. 'ಘೃತಲೇಪಂ ಪಾದಶೌಚಂ.... ' –ಸ್ಮೃತಿಮುಕ್ತಾವಲಿ

ಯಜುಃಶಾಖಿಗಳು ಪಾದಪ್ರಕ್ಷಾಲನದಲ್ಲಿ ಬ್ರಾಹ್ಮಣರ ಪಾದಕ್ಕೆ ಆಜ್ಯ ವನ್ನು ಲೇಪಿಸಬೇಕು.

೩ 'ಯಜ್ಞೋಪವೀತವದ್ಧಾರ್ಯ........' ಸ್ಮೃತಿ ಮುಕ್ತಾವಲಿ

ಯಜುಃ ಶಾಖಿಗಳು ಉತ್ತರೀಯ ವಸ್ತ್ರವನ್ನು ಯಜ್ಞೋಪವೀತ ದಂತೆ ಹೊತ್ತುಕೊಳ್ಳಬೇಕು ನಮಸ್ಕಾರ, ತರ್ಪಣ, ಶ್ರಾದ್ಧಕಾಲದಲ್ಲಿ ಮಾತ್ರ ಯಜಮಾನನು ಹೊತ್ತುಕೊಳ್ಳುವ ವಸ್ತ್ರವನ್ನು ಟೊಂಕಕ್ಕೆ ಕಟ್ಟಬೇಕು.

೪ ದಕ್ಷಿಣೇ ಕಟಿ ದೇಶೇತು ...... ' ನಿರ್ಣಯ ಸಿಂಧು

ಯಜುಃ ಶಾಖಿಗಳು ಶ್ರಾದ್ಧ ಮಾಡುವ ಕಾಲದಲ್ಲಿ ಟೊಂಕದ ಬಲಕ್ಕೆ ತಿಲಸಹಿತ ಮೂರು ದರ್ಭೆಗಳನ್ನು ಸಿಕ್ಕಿಸಿಕೊಂಡು, ಟೊಂಕಕ್ಕೆ ವಸ್ತ್ರ ಕಟ್ಟಿ ಕೊಳ್ಳ ಬೇಕೆಂಬದಾಗಿ ವಚನವಿದೆ.

೫. 'ಊರ್ಜಂ ವಹಂತಿ' ಮಂತ್ರದಿಂದ ಪಿಂಡವನ್ನು ಪಾತ್ರೆಯಿಂದ ಮುಚ್ಚುವದು ಇತ್ಯಾದಿಗಳು ಯಜುಃ ಶಾಖೀಯರಿಗೆ ಮಾತ್ರ ಹೇಳಲ್ಪಟ್ಟವೆ.

## (ಪರಿಶಿಷ್ಟ)

# ಸ್ಮೃತಿಪುರಾಣ ವಚನಗಳು

೧ ಅನೇಕ ಮಾತರೋ ಯಸ್ಯ ಶ್ರಾದ್ಧೇ ಚಾಪರಪಕ್ಷಕೇ ।
ಪಿಂಡಮೇಕಂ ತತಃ ಕುರ್ಯಾತ್ ಅರ್ಘ್ಯಂ ಚೈವ ಪೃಥಕ್ ಪೃಥಕ್ ॥

ಮಲತಾಯಿಂದಿರೂ ಸ್ವರ್ಗಸ್ಥರಾಗಿದ್ದಗೆ ಮಹಾಲಯ ಶಾದ್ಧದಲ್ಲಿ ಬೇರೆ ಬೇರೆ ಅರ್ಘ್ಯವಿತ್ತು ಒಂದೇ ಪಿಂಡ ಮಾಡಿದರೂ ಬರುವದು.

೨ ಅಲ್ಪಾಭಾವೇ ದ್ವಾದಶೀತು ದ್ವಾದಶೀ ಪಾರಣಂ ಕಥಮ್
ಉಷಃ ಕಾಲೇ ದ್ವಯಂ ಕುರ್ಯಾತ್ ಪ್ರಾತರ್ಮಾಧ್ಯಾಹ್ನಿಕಂತಥಾ ॥

ಸಾಧನಿ ದ್ವಾದಶೀ ದಿನದಲ್ಲಿ ಪ್ರಾತರ್ಮಾಧ್ಯಾಹ್ನ ಸಂಧ್ಯೆಗಳನ್ನು ಮುಗಿಸಿಕೊಂಡು ಪಾರಣೆ ಮಾಡಬೇಕು

೩. ದ್ವಾದಶೀ ಶ್ರಾದ್ಧ ವಿಷಯೇ ಕುತುಪೋನಹ್ಯಪೇಕ್ಷತೇ ।
ದ್ವಾದಶೀ ಶ್ರಾದ್ಧದಲ್ಲಿ ಕುತುಪ ಕಾಲದ ನಿರ್ಬಂಧವು ಇರುವದಿಲ್ಲ

೪ ಮಧೂಕ ಪರ್ಣ ರಂಭಾವಾ ಕಾಜಂವಾ ಬ್ರಾಹ್ಮಮೇವವಾ ।
ಪ್ಲಕ್ಷವಾ ದುಂಬರಂ ವಾಪಿ ನೂತುಲಂ ಚಾಪಿ ಪಾನಸಂ ।
ಜಂಬೂ ಪುನ್ನಾಗ ಪರ್ಣಂಚ ಭೋಜನೇಷು ವಿಶಿಷ್ಯತೇ ॥

ಇಪ್ಪಿ, ಬಾಳಿ, ಮುತ್ತಲ, ಬಸರಿ, ಅತ್ತಿ, ಮಲಕಂಚಿ, ಹಲಸು ನೇರಲ ಈ ಎಲೆಗಳು ಶ್ರಾದ್ಧ ಭೋಜನಕ್ಕೆ ಪ್ರಶಸ್ತವಾದವು

೫. ಸ್ವಾಗತೆ ಸ್ವಸ್ತಿವಚನೇ ಗೋತ್ರ ಶೇಷೇ ಪ್ರದಕ್ಷಿಣೇ।
ಸುಅರ್ಘ್ಯೇಚ ದಕ್ಷಿಣಾ ದಾನೇ ಷಟ್ಸು ಸವ್ಯಂ ವಿಧೀಯತೇ ॥

ಬ್ರಾಹ್ಮಣರ ಸ್ವಾಗತ, ಸ್ವಸ್ತಿವಾಚನ, ಗೋತ್ರೋಚ್ಚಾರ, ಪ್ರದಕ್ಷಿಣ ಅರ್ಘ್ಯ, ದಕ್ಷಿಣೆದಾನ ಈ ಆರು ಕಾರ್ಯಗಳನ್ನು ಸವ್ಯದಿಂದ ಮಾಡಬೇಕು

೬ ಪವಿತ್ರ ಗ್ರಂಥಿಸಂಯುಕ್ತೋ ವಿಪ್ರಪಾದಾಭಿಷೇಚನಂ।
ತಯೋರ್ವಜ್ರ ಹತೋ ವಿಪ್ರಃ ಸವಿಪ್ರಃ ಶ್ರಾದ್ಧಘಾತಕಃ ॥

ಪವಿತ್ರವನ್ನು ಧರಿಸಿದವನಾಗಿ ಪಾದಪ್ರಕ್ಷಾಲನ ಮಾಡಿದರೆ ಬ್ರಾಹ್ಮಣನಿಗೆ ವಜ್ರಾಘಾತಮಾಡಿದಂತೆ ಹಾಗು ಶ್ರಾದ್ಧ ಘಾತಕನೆನಿಸುವನು.

೭. ಪಿಂಡಾಸ್ತು ಗೋಽಜಪಿಪ್ರೇಭ್ಯೋ ದದ್ಯಾದಗ್ನೌ ಜಲೇಽಪಿವಾ ।
ಉತ್ತಮಾಂ ಗತಿಮನ್ವಿಚ್ಛನ್ ಗೋಷು ನಿತ್ಯಂ ಪ್ರಯಚ್ಛತಿ ॥

ಶ್ರಾದ್ಧಾನಂತರದಲ್ಲಿ ಪಿಂಡಗಳನ್ನು ಜಲದಲ್ಲಿ ಯಾಗಲಿ, ಬೆಂಕಿಯಲ್ಲಾಗಲಿ ಹಾಕಬೇಕು ಆಕಳಿಗೆ ಕೊಡುವದರಿಂದ ಪಿತೃಗಳಿಗೆ ಉತ್ತಮಗತಿಯಾಗುವದು

೮ ಅನಿರುದ್ಧಃ ಸ್ವಯಂಜ್ಞೇಯಃ ಪ್ರದ್ಯುಮ್ನಶ್ಚ ಪಿತಾಸ್ಮೃತಃ ।
ಸಂಕರ್ಷಣಸ್ತುಜ್ಜನಕೋ ವಾಸುದೇವಸ್ತು ತತ್ ಪಿತಾ ॥

ತನ್ನಲ್ಲಿ ಅನಿರುದ್ಧ, ತಂದೆಯಲ್ಲಿ ಪ್ರದ್ಯುಮ್ನ, ತಾತನಲ್ಲಿ ಸಂಕರ್ಷಣ, ಮುತ್ತಾತನಲ್ಲಿ ವಾಸುದೇವ ಹೀಗೆ ರೂಪಗಳನ್ನು ಭಾವಿಸಬೇಕು.

೯ ಗೋವಿಂದಂ ಪುಂಡರೀಕಾಕ್ಷಂ ಗಂಗಾ ಕಾಶೀಂ ಗಯಾಂ ತಥಾ।
ಗದಾಧರಂ ಸ್ಮರೇತ್ ಭಕ್ತ್ಯಾ ಶ್ರಾದ್ಧಸಾದ್ಗುಣ್ಯಹೇತವೇ ॥

ಶ್ರಾದ್ಧ ಪೂರ್ತಿಗಾಗಿ ಗೋವಿಂದ, ಪುಂಡರೀಕಾಕ್ಷ, ಗದಾಧರ ರೂಪಗಳನ್ನ ಗಂಗಾ ಕಾಶೀ ಗಯಾ ಕ್ಷೇತ್ರಗಳನ್ನು ಭಕ್ತಿಪೂರ್ವಕ ಸ್ಮರಿಸಬೇಕು.

೧೦. ವಿಷ್ಣೋಃ ಪ್ರೀತಿಕರಂ ನಿತ್ಯಂ ತುಲಸೀ ಮಂಜರೀ ಯಥಾ ।
ಸದಾಸ್ತು ವಿದುಷಾಂ ಪ್ರೀತ್ಯೈ ತಥೇಯಂ ಶ್ರಾದ್ಧಕಾರಿಕಾ ॥

ವಿಷ್ಣುವಿಗೆ ತುಲಸಿಯು ಪ್ರೀತಿಕರವಾಗಿರುವಂತೆ ಈ ಶ್ರಾದ್ಧಕಾರಿಕೆಯು ಪಂಡಿತರಿಗೆ ಪ್ರೀತಿಕಾರಕವಾಗಲಿ.

## ಅಥ ಧರ್ಮಪಿಂಡಶ್ಲೋಕಾಃ ।

ಆ ಬ್ರಹ್ಮಣೋಯೇ ಪಿತೃವಂಶಜಾತಾ ಮಾತುಸ್ತಥಾ ವಂಶಭವಾ ಮದೀಯಾಃ ।
ವಂಶದ್ವಯೇಽಸ್ಮಿನ್ ಮಮದಾಸಭೂತಾ ಭೃತ್ಯಾಸ್ತಥೈವಾಶ್ರಿತ ಸೇವಕಾಶ್ಚ॥
ಮಿತ್ರಾಣಿಸಖ್ಯಃ ಪಶವಶ್ಚಃ ವೃಕ್ಷಾದೃಷ್ಟಾಶ್ಚ ಸ್ಪೃಷ್ಟಾಶ್ಚ ಕೃತೋಪಕಾರಾಃ।
ಜನ್ಮಾಂತರೇ ಯೇ ಮಮಸಂಗತಾಶ್ಚತೇಭ್ಯಃ ಸ್ವಧಾ ಪಿಂಡಮಹಂ ದದಾಮಿ ॥ ೧ ॥

ಪಿತೃವಂಶೇ ಮೃತಾಯೇಚ ಮಾತೃವಂಶೇ ತಥೈವಚ
ಗುರುಶ್ವಶುರ ಬಂಧೂನಾಂ ಯೇ ಚಾನ್ಯೇ ಬಾಂಧವಾ ಸ್ಮೃತಾಃ ||
ಯೇ ಮೇ ಕುಲೇ ಲುಪ್ತಪಿಂಡಾಃ ಪುತ್ರದಾರ ವಿವರ್ಜಿತಾಃ |
ಕ್ರಿಯಾಲೋಪ ಗತಾಶ್ಚೈವ ಜಾತ್ಯಂಧಾಪಂಗವಸ್ತಥಾ ||
ವಿರೂಪಾ ಆಮಗರ್ಭಾಶ್ಚ ಜ್ಞಾತಾಜ್ಞಾತಾಃ ಕುಲೇಮಮ |
ಧರ್ಮಪಿಂಡೋ ಮಯಾದತ್ತೋ ಹ್ಯಕ್ಷಯ್ಯಮುಪತಿಷ್ಠತು || ೨ ||
ಉಚ್ಛಿನ್ನಕುಲವಂಶಾನಾಂ ಯೇಷಾಂ ದಾತಾ ಕುಲೇನಹಿ |
ಧರ್ಮಪಿಂಡೋ ಮಯಾದತ್ತೋ ಹ್ಯಕ್ಷಯ್ಯಮುಪತಿಷ್ಠತು || ೩ ||
ಅಸಿಪತ್ರವನೇ ಘೋರೇ ಕುಂಭೀಪಾಕೇ ಚ ಯೇ ಗತಾ |
ತೇಷಾಮುದ್ಧರಣಾರ್ಥಾಯ ಇಮಂ ಪಿಂಡಂ ದದಾಮ್ಯಹಂ || ೪ ||
—ಇತಿ ಧರ್ಮಪಿಂಡ ಶ್ಲೋಕಾಃ |

ಏಭಿರ್ಮಂತ್ರೈಃ ಪರಿತಃ ಚತುರ್ದಿಕ್ಷು ಚತುರಃ ಧರ್ಮ ಪಿಂಡಾನ್ ದದ್ಯಾತ್ | ಇತಿ ಶ್ರಾದ್ಧಮಂಜರ್ಯಾದಿಷು |

## ಅಥ ಪಿಂಡನಿರ್ವಪಣ ಕಾರಿಕಾಃ |

ಪಿತೃಪಾರ್ವಣತಃ ಪ್ರತ್ಯಗ್ಭಾಗೇ ಸ್ಯಾನ್ಮಾತೃಪಾರ್ವಣಂ |
ಮಾತುಃ ಪಶ್ಚಾತ್ಸಮಾತೋಃಕ್ತ್ರೀ ನೇಕತ್ವೇ ಪಿಂಡ ಏಕಕಃ || ೧ ||
ಪಿತೃಪಾರ್ವಣತಃ ಪೂರ್ವೇ ಸ್ಯಾನ್ಮಾತಾಮಹ ಪಾರ್ವಣಂ |
ತತ್ಪಶ್ಚಾತ್ಕ್ರಮತೋ ಮಾತಾಮಹೀ ಪಾರ್ವಣಮೀರಿತಮ್ ||೨||
ಆತ್ಮಪತ್ನೀ ಪಿತುರುದಕ್ ಸಮಾತುಃ ಪಶ್ಚಿಮೇ ಸುತಃ |
ದುಹಿತುಃ ಪಿಂಡ ಉದ್ದಿಷ್ಟಃ ಪ್ರಪಿತಾಮಹ ದಕ್ಷಿಣೆ || ೩ ||
ಸೂನೋಃ ಪಶ್ಚಾತ್ ಪಿತೃವ್ಯಸ್ಯಾನ್ಮಾತುಲಃ ಪಿತೃಪೂರ್ವತಃ |
ಸೂನೋಃ ಪಶ್ಚಿಮತೋ ಭ್ರಾತಾ ಸುತಾಯಾಮ್ಯೇ ಪಿತೃಷ್ವಸಾ|| ೪||
ತದ್ಯಾಮ್ಯೇಯಾಮ್ಯ ಸಂಸ್ಥಾಸ್ಯುರ್ಮಾತೃಷ್ವಸ್ರಾದಯೋಽಖಿಲಾಃ |
ತದ್ದಕ್ಷಿಣೇ ತಥೈವಾಸ್ಯುರ್ಧರ್ಮಪಿಂಡ ಚತುಷ್ಟಯಮ್ || ೫ ||
—ನಿಬಂಧ ಚೂಡಾಮಣಿ |

# ಜಿಜ್ಞಾಸುಗಳಿಗೆ ಹೆಚ್ಚಿನ ವಿಷಯಗಳು

೧ ಋಗ್ವೇದಿ ವೈಷ್ಣವೀಯ ಶ್ರಾದ್ಧ ಪದ್ಧತಿ ಪುಟ ೧೨ ರಲ್ಲಿ ೭ ನೆಯ ಸಾಲಿನಲ್ಲಿ ಗಂಧೋಪಚಾರಾನಂತರ, 'ಏಷವೋ ಧೂಪಃ (ಸುಧೂಪಃ) । ಏಷವೋ ದೀಪಃ (ಸುದೀಪಃ)' ಎಂಬ ವಾಕ್ಯಗಳನ್ನು ಬೇಕಾದವರು ಜೋಡಿಸಿಕೊಳ್ಳಬಹುದು

ಹೀಗೆ ಹೇಳುವ ಸಂಪ್ರದಾಯ ಮಾಧ್ವರಲ್ಲಿ ಇಲ್ಲದ ಕಾರಣ ಪ್ರಯೋಗದಲ್ಲಿ ಹೇಳಿಲ್ಲ ಕಾರಣ, ಬೇಕಾದವರು ಇದೇ ರೀತಿಯಾಗಿ ಪಿತೃಸ್ಥಾನ-ಲ್ಲಿಯೂ ಸೇರಿಸಿಕೊಳ್ಳಬಹುದು

೨ 'ಯುವಾಸುವಾಸಾ' ಈ ಮಂತ್ರದಿಂದ ಬ್ರಾಹ್ಮಣರಿಗೆ ವಸ್ತ್ರಗಳನ್ನು ಕೊಡುವದು (ಆಸನಾದಿ ಉಪಚಾರಾನಂತರದಲ್ಲಿ)

೩. ಯಜುಃಶಾಖೀಯರು 'ಅಯಂವೋ ಧೂಪಃ (ಸುಧೂಪಃ) । ಸೂರ್ಯಸ್ಥಿತಂವೋ ಜ್ಯೋತಿಃ (ಸುಜ್ಯೋತಿಃ) । ಎಂಬುದಾಗಿ ಹೇಳುವದುಂಟು ಇದೇ ರೀತಿ ಪಿತೃಸ್ಥಾನದಲ್ಲಿಯೂ ಹೇಳುವರು.

ಆದರೆ ಈ ಸಂಪ್ರದಾಯ ಮಾಧ್ವರಲ್ಲಿ ಇಲ್ಲ.

೪ ಅನ್ನನಿವೇದನ ಕಾಲದಲ್ಲಿ 'ಇದಮನ್ನಂ' ಎಂದು ಹೇಳಿ 'ಸೋದಕುಂಭಂ' ಎಂದೂ ಹೇಳಬೇಕು. ಪಿತೃಸ್ಥಾನದಲ್ಲಿಯೂ ಇದೇ ರೀತಿ ಹೇಳುವರು. ಆಪಸ್ತಂಬರೂ ಇದೇ ರೀತಿ ಹೇಳಬೇಕು

ಈ ಸಂಪ್ರದಾಯ ಕೂಡ ಮಾಧ್ವರಲ್ಲಿ ಕಾಣ ಬರುವದಿಲ್ಲ

# ಉತ್ತರ ಭಾರತ ತೀರ್ಥಕ್ಷೇತ್ರ ಸಂಕಲ್ಪ ವಿಶೇಷಃ ।

೧, **ಕಾಶೀಕ್ಷೇತ್ರ ಸಂಕಲ್ಪಃ ।** ಆಚಮ್ಯ ಪ್ರಾಣಾನಾಯಮ್ಯ ಶ್ರೀಗೋವಿಂದ ಗೋವಿಂದ ಶ್ರೀ ವಿಷ್ಣೋರ್ಭಗವತೋಃ ...... ಇತ್ಯಾದಿ, ಭರತವರ್ಷೇ ಭರತಖಂಡೇ ಜಂಬೂದ್ವೀಪೇ ಮೇರೋಃ ದಕ್ಷಿಣ ದಿಗ್ಭಾಗೇ

ವಿಂಧಸ್ಯ ಉತ್ತರೇ ಆರ್ಯಾವರ್ತೈಕ ದೇಶೇ ಅವಿಮುಕ್ತ ವಾರಾಣಸೀ ಕ್ಷೇತ್ರೇ ಆನಂದವನೇ ಮಹಾಶ್ಮಶಾನೇ ಗೌರೀಮುಖೇ ತ್ರಿಕಂಟಕ ವಿರಾಜಿತೇ ಅಸೀವರ್ರುಣಯೋರ್ಮಧ್ಯೇ ಉತ್ತರವಾಹಿನ್ಯಾಮ್ ಭಾಗೀರಥ್ಯಾಃ ಪಶ್ಚಿಮೇತೀರೇ ವಿಕ್ರಮ ಶಕೆ.... .. ಇತ್ಯಾದಿ ಶುಭತಿಥೌ ।

೨. **ಗಯಾಕ್ಷೇತ್ರ ಸಂಕಲ್ಪಃ ।** ಭರತಖಂಡೇ ಮೇರೋಃ ದಕ್ಷಿಣ ದಿಗ್ಭಾಗೇ ವಿಂಧಸ್ಯ ಉತ್ತರೇ ಆರ್ಯಾವರ್ತಾಂತರ್ಗತ ಮಗಧದೇಶೇ ಚಂಪ ಕಾರಣ್ಯೇ ಮಧುವನೇ ಕೋಲಾಹಲಪರ್ವತೇ ಗಯಾಗದಾಧರ ಕ್ಷೇತ್ರೇ ವಿಕ್ರಮಶಕೆ .... ಇತ್ಯಾದಿ ।

೩. **ಪ್ರಯಾಗ ಕ್ಷೇತ್ರ ಸಂಕಲ್ಪಃ ।** ಭರತಖಂಡೇ ಜಂಬೂದ್ವೀಪೇ ಮೇರೋಃ ದಕ್ಷಿಣದಿಗ್ಭಾಗೇ ವಿಂಧಸ್ಯೋತ್ತರೇ ಆರ್ಯಾವರ್ತಾಂತರ್ಗತ ಬ್ರಹ್ಮಾವರ್ತೈಕದೇಶೇ ವಿಷ್ಣು ಪ್ರಜಾಪತಿ ಕ್ಷೇತ್ರೇ ಅಂತರ್ವೇದ್ಯಾಂ ಷಟ್ ಕೂಲಮಧ್ಯೇ ಭಾಗೀರಥ್ಯಾಃ ಪಶ್ಚಿಮೇ ತೀರೇ ಕಾಲಿಂದ್ಯಾಃ ಉತ್ತರೇತೀರೇ ವಟಸ್ಯ ಪೂರ್ವಾದಿಗ್ಭಾಗೇ ವಿಕ್ರಮಶಕೇ ಅಮುಕ ಸಂವತ್ಸರೇ ಇತ್ಯಾದಿ ।

೪ **ಅಯೋಧ್ಯಾ ಕ್ಷೇತ್ರ ಸಂಕಲ್ಪಃ ।** ಭರತಖಂಡೇ ಆರ್ಯಾವರ್ತಾಂತರ್ಗತ ಕೌಸಲದೇಶೇ ಪ್ರಮೋದವನೇ ನರಾಹುಖರೇ ಸಾರಸ್ವತ ಕ್ಷೇತ್ರೇ ನಂದಿಗ್ರಾಮೇ ಅಯೋಧ್ಯಾಯಾಂ ಬ್ರಹ್ಮಮಾನಸತೀರ್ಥೇ ಸ್ವರ್ಗ ದ್ವಾರೇ ವಿಕ್ರಮಶಕೆ ಇತ್ಯಾದಿ ।

೫. **ಹರಿದ್ವಾರ ಕ್ಷೇತ್ರೇ ಸಂಕಲ್ಪಃ ।** ಭರತವರ್ಷೇ ಭರತಖಂಡೇ ಆರ್ಯಾವರ್ತಾಂತರ್ಗತ ಹಿಮಪರ್ವತೈಕದೇಶೇ ಹರಿದ್ವಾರೇ ಮಾಯಾಪುರೀ ಮಂಡಲೇ ಕೇದಾರಖಂಡೇ ಸುದರ್ಶನ ಕ್ಷೇತ್ರೇ ವಿಕ್ರಮಶಕೆ ಇತ್ಯಾದಿ ।

೬ **ಬದರೀ ಕ್ಷೇತ್ರ ಸಂಕಲ್ಪಃ ।** ಭರತವರ್ಷೇ ಭರತಖಂಡೇ ಆರ್ಯಾವರ್ತಾಂತರ್ಗತ ಹಿಮಪರ್ವತೈಕದೇಶೇ ಬದರಿಕಾಶ್ರಮೇ ನರ ನಾರಾಯಣ ಪರ್ವತಯೋರ್ಮಧ್ಯೇ ಪಂಚಶಿಲಾಂತರ್ಗತ ತಪ್ತಕುಂಡಾಖ್ಯ

ವಹ್ನಿಕ್ಷೇತ್ರೇ ವಿಕ್ರಮಶಕೇ ಶ್ರೀ ಬದರೀ ನಾರಾಯಣ ಚರಣಾರವಿಂದ ಸನ್ನಿಧೌ ಇತ್ಯಾದಿ ।

೭. **ದ್ವಾರಕಾ ಕ್ಷೇತ್ರ ಸಂಕಲ್ಪಃ** । ಭರತವರ್ಷೇ ಭರತಖಂಡೇ ಸೌರಾಷ್ಟ್ರ ದೇಶಾಂತರ್ಗತ ಆನರ್ತದೇಶೇ ಓಖಾಮಂಡಲೇ ಚಂಪಕವನೇ ಕುಶಸ್ಥಲ್ಯಾಃ ದ್ವಾರಕಾ ತ್ರಿವಿಕ್ರಮಕ್ಷೇತ್ರೇ ಗೋಮತ್ಯಾಃ ಉತ್ತರ ತೀರೇ ವಿಕ್ರಮಶಕೆ ಇತ್ಯಾದಿ ।

೮ **ಮಾತೃಗಯಾ ಕ್ಷೇತ್ರ ಸಂಕಲ್ಪಃ** । ಭರತವರ್ಷೇ ಭರತಖಂಡೇ ಜಂಬೂದ್ವೀಪೇ ಬಿಂದುಸರೋವರೇ ಆರ್ಯಾವರ್ತಾಂತರ್ಗತ ಅರ್ಬುದಾರಣ್ಯೇ ಕಪಿಲಕರ್ದಮಾಶ್ರಮೇ ರೇವಾಯಾಃ ಉತ್ತರೇತೀರೇ ಸರಸ್ವತ್ಯಾಃ ಪಶ್ಚಿಮೇ ತೀರೇ ಶಾಲಿವಾಹನ ಶಕೆ ಕಾನ್ಯಕುಬ್ಜ ಕನ್ಯಕಾನಾಮ್ನಿ ಕ್ಷೇತ್ರೇ ಇತ್ಯಾದಿ ।

## 'ವೈಷ್ಣವೀಯ ಶ್ರಾದ್ಧಪದ್ಧತಿ'ಯಲ್ಲಿ ಉದಾಹರಿಸಿದ ಗ್ರಂಥಗಳ ಹಾಗು ಗ್ರಂಥಕಾರರ ನಾಮ ನಿರ್ದೇಶನ.

| | | |
|---|---|---|
| ೧ | ಸ್ಮೃತಿಮುಕ್ತಾವಲಿ | ಶ್ರೀ ಕೃಷ್ಣಾಚಾರ್ಯ ಸಂಗ್ರಹಿತ |
| ೨ | ನಿಬಂಧ ಚೂಡಾಮಣಿ | ತಿರುಮಲಾಚಾರ್ಯ ವಿರಚಿತ |
| ೩ | ಶ್ರಾದ್ಧಮಂಜರಿ | ಕೇಳಕರ ಬಾಪೂ ಭಟ್ಟ ವಿರಚಿತ |
| ೪ | ಶ್ರಾದ್ಧಮಯೂಖ | ಭಟ್ಟ ನೀಲಕಂಠ ವಿರಚಿತ |
| ೫ | ಪ್ರಯೋಗಚಿಂತಾಮಣಿ | ಸೂರ್ಯರಾಮಶಾಸ್ತ್ರಿ ಪರಿಶೋಧಿತ |
| ೬ | ಆಶ್ವಲಾಯನ ಸೂತ್ರ | ಆಶ್ವಲಾಯನಮುನಿ ಪ್ರಣೀತ |
| ೭ | ಆಪಸ್ತಂಬ ಸೂತ್ರಂ | ಆಪಸ್ತಂಬ ಮುನಿ ಪ್ರಣೀತ |
| ೮ | ಆಶ್ವಲಾಯನಕಾರಿಕಾ | ಆಶ್ವಲಾಯನಾಚಾರ್ಯ ಪ್ರಣೀತ |
| ೯ | ಧರ್ಮಪ್ರವೃತ್ತಿಃ | ಭಟ್ಟ ನಾರಾಯಣ ವಿರಚಿತ |
| ೧೦ | ಧರ್ಮಸಿಂಧು | ಕಾಶೀನಾಥೋಪಾಧ್ಯಾಯವಿರಚಿತ |
| ೧೧ | ನಿರ್ಣಯಸಿಂಧು | ಶ್ರೀ ಕಮಲಾಕರ ಭಟ್ಟ ಪ್ರಣೀತ |

೧೨ ಶ್ರಾದ್ಧಚಂದ್ರಿಕಾ, ಶ್ರಾದ್ಧಕಾರಿಕಾ, ಶ್ರಾದ್ಧಕಲ್ಪಲತಾ ಇತ್ಯಾದಿ ಗ್ರಂಥಕರ್ತರ ಹೆಸರು ಉಪಲಬ್ಧವಿಲ್ಲ

# ಪ್ರಯೋಗಪರಿಶೋಧಕರು ಹಾಗೂ ಪ್ರೋತ್ಸಾಹಕರು

೧ ದಿ. ಪಂ ಚತುರ್ವೇದಿ ರಾಮಚಂದ್ರಾಚಾರ್ಯ,
ನಿವೃತ್ತ ಮೀಮಾಂಸಾ ಪ್ರಾಧ್ಯಾಪಕರು, ಮೈಸೂರ

೨ ಪಂಡಿತರತ್ನ ಮಾಹುಲಿ ಗೋಪಾಲಾಚಾರ್ಯ,
ಪ್ರಾಚಾರ್ಯ ವಾಣೀವಿಹಾರ ವಿದ್ಯಾಲಯ, ಮುಂಬಯಿ

೩ ಪಂ. ಪಾಂಘ್ರಿ ತಾತಾಚಾರ್ಯ,
ನ್ಯಾಯ ವೇದಾಂತ ಪಂಡಿತರು, ಬೆಳಗಾವಿ

೪ ಪಂ. ಹುನಗುಂದ ಕೇಶವಾಚಾರ್ಯ,
ನ್ಯಾಯ ವೇದಾಂತ ವಿದ್ವಾಂಸರು, ಗದಗ

೫ ಪಂ ಮುರಕರ ಬಿಂದಾಚಾರ್ಯ,
ವ್ಯಾಕರಣ ಶ್ರೌತ ಸ್ಮಾರ್ತ ವಿಶಾರದ, ಮುಧೋಳ

೬ ಪಂ ಬೀಳೂರ ಗೋಪಾಲಾಚಾರ್ಯ,
ವೇದಾಂತ ಸಾಹಿತ್ಯ ಜ್ಯೋತಿಷ ವಿದ್ವಾಂಸರು, ಅಥಣಿ

೭ ಪಂ. ಆದ್ಯ ಮಧ್ವಾಚಾರ್ಯ,
ವೇದಾಂತ ಮೀಮಾಂಸಾಚಾರ್ಯ ಹಿಂದು ವಿಶ್ವವಿದ್ಯಾಲಯ, ವಾರಾಣಸಿ

೮ ಪಂ. ಟೋಣಪೆ ಗೋಪಾಲಾಚಾರ್ಯ,
ಸಾಹಿತ್ಯ ಶಾಸ್ತ್ರ ಕೋವಿದ ಮಧ್ವಾಶ್ರಮ ಹನುಮಾನಘಾಟ, ವಾರಾಣಸಿ



# ವೈದಿಕ ಗ್ರಂಥ ಪ್ರಕಾಶನ ನಿಲಯ ಗದಗ

## ಉಪಲಬ್ಧ ಗ್ರಂಥಗಳು ...

೧. ವಿಷ್ಣುಮಹಾಯಾಗ ಪದ್ಧತಿ (ಸಂಸ್ಕೃತ) ರೂ ೨—೫೦

೨ ಆಪಸ್ತಂಬಶ್ರಾದ್ಧ ಪ್ರಯೋಗ (ಸಂಸ್ಕೃತ ರೂ ೧ ೦೦

೩. ಆಶ್ವಲಾಯನ ಶ್ರಾದ್ಧ ಪ್ರಯೋಗ (ಕನ್ನಡ) ರೂ ೧—೦೦

೪ ಆಶ್ವಲಾಯನ ಶ್ರಾದ್ಧ ಪದ್ಧತಿ (ಕನ್ನಡ) ರೂ ೨ - ೦೦

೫ ಆಪಸ್ತಂಬ ಉತ್ಸರ್ಜನೋಪಾಕರ್ಮ ಪ್ರಯೋಗ (ಸಂಸ್ಕೃತ) ರೂ ೨—೦೦

೬ ವೈಷ್ಣವೀಯ ವಾಸ್ತು ಶಾಂತಿ ಪದ್ಧತಿ (ಕನ್ನಡ ಲಿಪಿ) ರೂ ೨—೦೦

೭ ಜೀರ್ಣೋದ್ಧಾರ ಹಾಗು ಸಂಪ್ರೋಕ್ಷಣ ಪ್ರಯೋಗ (ಸಂಸ್ಕೃತ। ರೂ ೨--೦೦

೮. ವೈಷ್ಣವ ನಿತ್ಯಾಹ್ನಿಕ ಪದ್ಧತಿ (ಕನ್ನಡ) ರೂ ೨—೫೦
(ದ್ವಿತೀಯ ಮುದ್ರಣ)

ಶ್ರೀ. ಪ. ಶೇ. ಹೊಂಬಾಳಿ ಇವರಿಂದ ನ್ಯೂ ಗದಗ ಪ್ರಿಂಟರಿಯಲ್ಲಿ ಮುದ್ರಿಸಲ್ಪಟ್ಟು
ಶ್ರೀ ರಾಘವೇಂದ್ರಾಚಾರ್ಯರ ಬುರ್ಲಿ ಇವರಿಂದ ಪ್ರಕಾಶಿತವು